# ರಮಕ್ಷ ಜೋಂಪೆ

## ಅರೆಬಾಸೆ ಯಕ್ಷಗಾನ ಪ್ರಸಂಗಗ

ಅರೆಬಾಸೆಗೆ
**ಭವ್ಯಶ್ರೀ ಕುಲ್ಕುಂದ**



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ದಶವರ್ಷ ಸಂಭ್ರಮದ ಪುಸ್ತಕಮಾಲಿಕೆ 2022

# ಯಕ್ಷ ಜೊಂಪೆ

## ಅರೆಬಾಸೆ ಯಕ್ಷಗಾನ ಪ್ರಸಂಗ

ಅರೆಬಾಸೆಗೆ
**ಭವ್ಯಶ್ರೀ ಕುಲ್ಕುಂದ**



**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ (ರಿ)**
ಕೊಡಗು ಜಿಲ್ಲೆ, ಮಡಿಕೇರಿ

Decennial Year Publication Series 2022

**ಯಕ್ಷಜೊಂಪೆ** – ಅರೆಬಾಸೆ ಯಕ್ಷಗಾನ

**Yakshajompe**
Yakshagana Prasanga in Arebase by

**Bhavyashree Kulkunda**
W/o. Harisha Kulkunda
Kulkunda Kuduremajalu House, Subrahmanya Post & Village
Kabada Taluk - 574 238
Mobile: 8105788168

**ಸಲಹಾ ಸಮಿತಿ :**
ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ಶ್ರೀಮತಿ ಸ್ಮಿತಾ ಅಮೃತರಾಜ್
ಡಾ. ವಿಶ್ವನಾಥ ಬದಿಕಾನ
ಶ್ರೀ ಭರತೇಶ ಅಲಸಂಡೆಮಜಲು

ಪ್ರಕಟಣೆ :
**ರಿಜಿಸ್ಟ್ರಾರ್**
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಪುಸ್ತಕ ದೊರೆಯುವ ಸ್ಥಳ :
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಕಾಫಿಕೃಪ ಬಿಲ್ಡಿಂಗ್, ರಾಜಸೀಟ್ ರಸ್ತೆ, ಮಡಿಕೇರಿ
ದೂ: 08272–223055, ಮೊ : 6362522677
arebaseacademy@gmail.com, www.arebasheacademy.gov.in

ಪ್ರಕಟಣೆಯ ವರ್ಷ : 2022

ಆಕಾರ : ಕ್ರೌನ್ 1/8 ಕಾಗದ : 80 ಜಿಎಸ್ಎಂ ಮ್ಯಾಪ್ಲಿತೋ
ಪುಟಗಳು : 80 ಬೆಲೆ : ರೂ. 100
ಪ್ರತಿಗಳು : 100

ಮುಖಪುಟ ವಿನ್ಯಾಸ : **ಕಲ್ಲೂರು ನಾಗೇಶ**
ಪುಟವಿನ್ಯಾಸ ಮತ್ತು ಮುದ್ರಣ
**ಆಕೃತಿ ಪ್ರಿಂಟ್ಸ್**
ಲೈಟ್‌ಹೌಸ್ ಹಿಲ್ ರಸ್ತೆ, ಮಂಗಳೂರು – 575 001
ದೂ: 0824 2972002

# ಅಧ್ಯಕ್ಷರ ಮಾತ್

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಪುಸ್ತಕ ಪ್ರಕಟಣಾ ಯೋಜನೆ ಅಡಿಲಿ ಭವ್ಯಶ್ರೀ ಕುಲ್ಕುಂದ ಅವರ 'ಯಕ್ಷಜೊಂಪೆ' ಪುಸ್ತಕ ಬರ್ತಾ ಇರ್ದು ಕುಸಿನ ಸಂಗತಿ.

ಯಕ್ಷಗಾನ ಬಯಲಾಟ ಮತ್ತೆ ಯಕ್ಷಗಾನ ತಾಳಮದ್ದಲೆ ಕರಾವಳಿ ಮತ್ತೆ ಮಲ್ನಾಡ್ ಪ್ರದೇಸಲಿ ಬಾರಿ ಹೆಸ್ರ್ ಮಾಡ್ದ ಕಲೆ. ದ.ಕ. ಜಿಲ್ಲೆನ ಸುಳ್ಯಂದ ಸುರಾಗಿ ಉ.ಕ. ಜಿಲ್ಲೆ ಮತ್ತೆ ಶಿವಮೊಗ್ಗ ಜಿಲ್ಲೆನ ಕೊಡಿಲಿರುವ ಸಾಗರ ತನಕನೂ ಊರ್ ಊರ್‌ಲಿ ಯಕ್ಷಗಾನ ಕಲಾವಿದರ್ ಮತ್ತೆ ಸಂಘಟಕರ್ ಒಳೊ. ಅವರವರ ಊರ್‌ಲಿ ಆಗ್‌ವ ಉತ್ಸವ, ಜಾತ್ರೆ, ಬೇರೆ ಬೇರೆ ಜಂಬರಲಿ ಯಕ್ಷಗಾನನೋ, ತಾಳಮದ್ದಲೆನೋ ಅಲ್ಲಿನ ಜೆನಗಳಿಗೆ ಮಾಡ್‌ಸದೆ ಇದ್ರೆ ಅವ್ಕೆ ಜಂಬರದ ಊಟ ಮೈಗೆ ಹಿಡಿಯಕ್ಕಿಲ್ಲೆ. ಅಷ್ಟರಮಟ್ಟಿಗೆ ಯಕ್ಷಗಾನನ ಜೆನಗ ಹಚ್ಚಿಕಂಡೊಳೊ. ಯಕ್ಷಗಾನ ಕಲೆ ಕನ್ನಡ, ತುಳು ಬಾಸೆಲಿ ಹೆಚ್ಚ್ ಪ್ರಚಾರ ಪಡ್ದುಟ್ಟು. ಹಂಗೆನೆ ಪ್ರಯೋಗ ಮಾಡ್‌ವ ಸಂದರ್ಬಲಿ ಇಂಗ್ಲಿಷ್ ಸೆರ್ದಂಗೆ ಬೇರೆ ಬೇರೆ ಬಾಸೆಲಿ ಕೂಡಾ ಬಂದುಟ್ಟು. ನಮ್ಮ ಅವ್ವಬಾಸೆ 'ಅರೆಬಾಸೆ'ಲಿ ಕೂಡಾ ಈ ಹಿಂದೆ ಅರೆಬಾಸೆ ಯಕ್ಷಗಾನ ಮತ್ತೆ ತಾಳಮದ್ದಲೆ ಪ್ರಯೋಗ ನಡ್ದುಟ್ಟು. ಆದರೆ ಒಂದ್ ಕೊರ್‌ತೆ ಮಾತ್ರ ಯಾಗೊಳೂ ಇತ್ತ್. ಅದ್ ಏನ್‌ಂತೇಳ್ರೆ ಬಾಗವತರ್ ಪದ್ಯನ ಕನ್ನಡಲಿ ಹಾಡ್ತ ಇದ್ದೊ. ಅರೆಬಾಸೆಲಿ ಯಕ್ಷಗಾನದ ಪದ್ಯಗ ಯಾರ್ ಕೂಡಾ ಬರ್‌ದಿತ್ಲೆ. ಈ ಕೊರ್‌ತೆನ ಸಮ ಮಾಡೋಕಾದ್ರೆ ಯಾರಾದ್ರ್ ಅರೆಬಾಸೆಲಿ ಬರ್‌ದ್ ಹಾಡಿ ತೊರ್ಸೋಕಾಗಿತ್ತ್.

ನಾವು ಅರೆಬಾಸೆಲಿ ಯಾರಾದ್ರ್ ಬರೆಕ್ಕೆ ಜೆನ ಒಳೊನೊ ಅಂತಾ ಹುಡ್‌ಕ್‌ತ್ತಾ ಇರ್ಕನ ಭವ್ಯಶ್ರೀ ಕುಲ್ಕುಂದ ಕನ್ನಡಲಿ ಬರ್ದವೆತ ಸುಬ್ರಾಯ ಸಂಪಾಜೆ ಮತ್ತೆ ಜಬ್ಬಾರ್ ಸಮೊ ಮಾಹಿತಿ ಕೊಟ್ಟೊ. ಭವ್ಯಶ್ರೀ ಅವ್ಕೆ ಮಾತಾಡಿ ನೀವು ಅರೆಬಾಸೆಲಿ 'ಶರಸೇತು ಬಂಧನ' ಪ್ರಸಂಗನ ಬರ್ದ್ ಕೊಡೊಕು ಅಂತಾ ಕೇಳಿಕಂಡೊ. ನಾ ಪ್ರಯತ್ನಪಟ್ಟನೇ ಅಂತಾ ಹೇಳಿ ಬರೆಕೆ ಸುರು ಮಾಡ್ದೊ. ಬರ್ದದರ ಓದಿ ನೋಡಿ ಸುಬ್ರಾಯ ಸಂಪಾಜೆ ಅವು ಬಾರಿ ಪೊರ್ಲುಲಿ ತಾಳಕ್ಕೆ ಸಿಕ್‌ವಂಗೆ ಬರ್ದೊಳೊತ ಮೆಚ್ಚಿಗೆ ಸೂಚಿಸಿದೊ. ನಂಗೆ ಈ ಮಾತ್ ತುಂಬಾ ದೈರ ಕೊಟ್ಟತ್. ಹಂಗಾಗಿ ಅವರೊಟ್ಟಿಗೆ ಇನ್ನೊಂದಸ್ಟ್ ಪ್ರಸಂಗಗಳ ಬರ್ದ್ ಕೊಡಿಕೆ ಕೇಳಿಕಂಡೊ. ಅವು ತುಂಬಾ ಪ್ರೀತಿಲಿ ಪಂಚವಟಿ, ಕಂಸವಧೆ, ಕೃಷ್ಣಾರ್ಜುನ ಕಾಳಗ, ಇಂದ್ರಜಿತು ಕಾಳಗ, ವಾಲಿವಧೆ ಪ್ರಸಂಗನ ಬರ್ದ್ ಕೊಟ್ಟೊ. ಅದರೆಲ್ಲ ಒಟ್ಟು ಸೇರ್‌ಸಿ ಪುಸ್ತಕ ರೂಪಲಿ ತರ್ತಾ ಒಳೊ. ಮುಂದೆನ ದಿನಲಿ ಅರೆಬಾಸೆಲಿ ಹೆಚ್ಚ್ ಹೆಚ್ಚ್ ಯಕ್ಷಗಾನ ಮತ್ತೆ ತಾಳಮದ್ದಲೆ ಪ್ರದರ್ಶನ ನಡೆಲಿ. ಆಗ ಬಾಸೆಗೆ ಹೆಚ್ಚ್ ಪ್ರಚಾರ ಸಿಕ್ಕಿದೆ. ಹಂಗೆನೆ ಹೊಸ ಪೀಳಿಗೆಗೆ ಪುರಾಣದ ಜ್ಞಾನನೂ ಸಿಕ್ಕುವಂಗೆ ಆದೆ.

ಅರೆಬಾಸೆನ ಇತಿಹಾಸಲಿ ಸುರುಗೆ ಅರೆಬಾಸೆಲಿ ಪ್ರಸಂಗ ರಚನೆ ಮಾಡಿ ಹೆಸ್ರ್ ಮಾಡ್ದ ಭವ್ಯಶ್ರೀ ಕುಲ್ಕುಂದ, ತೊಪ್ಪುಗಳ ತಿದ್ದಿಕೊಟ್ಟ ಸುಬ್ರಾಯ ಸಂಪಾಜೆ, ಪ್ರಸಂಗನ ಓದಿ ಸಲಹೆ ಕೊಟ್ಟ ಜಬ್ಬಾರ್ ಸಮೊ ಹಂಗೆನೇ ಪ್ರಯೋಗ ಸಂದರ್ಬಲಿ ಅರೆಬಾಸೆಲಿ ಅರ್ತ ಹೇಳ್ದ ಕಲಾವಿದರ್‌ನ ಕೂಡ ಅರೆಬಾಸಿಗರ ಪರವಾಗಿ ನೆನ್ಸಿಕಣೆ.

**ಲಕ್ಷ್ಮೀನಾರಾಯಣ ಕಜೆಗದ್ದೆ**

ಅಧ್ಯಕ್ಷರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

# ಎರಡ್ ಮಾತ್

ಯಕ್ಷಗಾನ ಬಯಲಾಟ ಕರ್ನಾಟಕದ ಒಂದ್ ವಿಶೇಷ ಕಲೆ. ಅಲ್ಲಿ ಮಾತ್, ವೇಷ, ಹಾಡ್, ನೃತ್ಯ, ಅಬಿನಯ ಎಲ್ಲವೂ ಉಟ್ಟು. ಸಮಾಜಲಿ ಒಳ್ಳೆ ಮನಸ್, ಸಂಸ್ಕಾರ ಬೆಳೆಸೊಕೂತ ಹೇಳ್ದು ಈ ಕಲೆಯ ಉದ್ದೇಸ. ಈ ರಂಗ ಸಂಪ್ರದಾಯ ಕರ್ನಾಟಕದ ಬೇರೆ ಬೇರೆ ಪ್ರದೇಸಲಿ ಬೇರೆ ಬೇರೆ ರೂಪಲಿ ಉಟ್ಟು. ಕಾಸರಗೋಡು, ದಕ್ಷಿಣ ಕನ್ನಡ, ಉತ್ತರ ಕನ್ನಡ ಪ್ರದೇಸಗಳ್‌ಲಿ ಹೆಚ್ಚಿನ ಪ್ರಮಾಣಲಿ ಬೆಳ್ದ್ ಜನ್ರ ಮೇಲೆ ದೊಡ್ಡ ಪ್ರಬಾವ ಬೀರ್ದ ಈ ಕಲೆ ಈಚೆಗೆ ಮೈಸೂರು, ಬೆಂಗಳೂರು ಮತ್ತೆ ಮುಂಬಯಿ ಪಟ್ಟಣಲೂ ಗಟ್ಟಿ ನೆಲೆ ಊರ್ತಾ ಉಟ್ಟು. ಯಕ್ಷಗಾನ ಹೆಚ್ಚ್ ಬೆಳ್ದದ್ ಕನ್ನಡ ಬಾಸೆಲಿ, ಕನ್ನಡ ಜಿಲ್ಲೆಲಿ. ಕನ್ನಡಕ್ಕೆ ಯಕ್ಷಗಾನದ ಕೊಡುಗೆ ಬಾರೀ ದೊಡ್ಡದ್.

ಕನ್ನಡ ಬುಟ್ರೆ ಯಕ್ಷಗಾನ ಪ್ರಯೋಗ ಹೆಚ್ಚ್ ನಡ್ದದ್ ತುಳು ಬಾಸೆಲಿ. ಕುಂದಾಪುರ ಕನ್ನಡ, ಕೊಂಕಣಿ, ಹಿಂದಿ ಮತ್ತೆ ಇಂಗ್ಲಿಷ್ ಈ ಬಾಸೆಗಳ್‌ಲೂ ಈ ಕಲೆನ ಪ್ರಯೋಗ ಮತ್ತೆ ಪ್ರದರ್ಶನ ಆಗುಟು. ಇದೇ ದಾರಿಲಿ ಸಾಗಿ ಅರೆಬಾಸೆಲಿ ಈಗ ಯಕ್ಷಗಾನ ಪ್ರಸಂಗ ರಚನೆ, ಪ್ರಯೋಗ ಮತ್ತೆ ಪ್ರದರ್ಸನ ನಡೀತಾ ಇರ್ದು ಒಳ್ಳೆ ವಿಸಯ. ನಿಮ್ಮ ಕೈಲಿರುವ ಈ ಪುಸ್ತಕಲಿ ಒಟ್ಟು 6 ಪ್ರಸಂಗಗ ಉಟ್ಟು. ಇವುಗಳ್‌ನ ಕನ್ನಡಲಿ ಬರ್ದ ಮೂಲ ಕವಿಗ ಈಗ ಇಲ್ಲೆ. ಅರೆಬಾಸೆಲಿ ತಂದವು ಬಾಗವತರಾದ ಭವ್ಯಶ್ರೀ ಕುಲ್ಕುಂದ ಅವು. ಯಕ್ಷಗಾನ ಅರೆಬಾಸೆಲೂ ಬೇಕುತ ಯೋಚನೆ ಬಂದ್ ಭವ್ಯಂಗೆ ಹೇಳಿ

ಇಷ್ಟ್ ಪ್ರಸಂಗಗಳ್ನ ಬರೆಸಿದವು ಅರೆಬಾಸೆ ಅಕಾಡೆಮಿ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆಯವು.

ಭವ್ಯಶ್ರೀ ತೆಂಕುತಿಟ್ಟು ಯಕ್ಷಗಾನ ಕ್ಷೇತ್ರಲಿ ಒಳ್ಳೆ ಹೆಸ್ರ್ ಮಾಡ್ದ ಹವ್ಯಾಸಿ ಬಾಗವತರ್. ಅವರ ವಿಸೇಸತೆಂತೇಳ್ರೆ ಅವಕ್ಕೆ ಯಕ್ಷಗಾನ ಪದ್ಯ ಹೇಳ್‌ವ ಕ್ರಮ ಗೊತ್ತುಟು. ಹಾಡುಗಾರಿಕೆಯ ನರನಾಡಿನ ಅವು ತಿಳ್ಕೊಂಡೊಳೊ. ಈ ಗಾನ ಸಂಪ್ರದಾಯನ ಹಾಳ್ ಮಾಡಿಕೆ ಬೊತ್ತ್‌ತೇಳುವ ನಿಷ್ಟೆನೂ ಅವರಲ್ಲಿ ಉಟ್ಟು. ಯಕ್ಷಗಾನ ಛಂದಸ್‌ನ ಭವ್ಯಶ್ರೀ ಅವ್ ಶಾಸ್ತ್ರೀಯವಾಗಿ ಅಬ್ಯಾಸ ಮಾಡ್ಯೊಳೊ.

ಯಕ್ಷಗಾನಲಿ ದೊಡ್ಡ ಹೆಸರ್ ಮಾಡ್ದ ಬಾಗವತರ್ ಸುಮಾರ್ ಜನ ಒಳೊ. ಬಲಿಪ ನಾರಾಯಣ ಭಾಗವತ, ಅಗರಿ ಶ್ರೀನಿವಾಸ ಭಾಗವತ, ಸಣ್ಣ ಬಲಿಪರ್, ಕಡತೋಕ ಮಂಜುನಾಥ ಭಾಗವತ, ಹೊಸ್ತೋಟ ಮಂಜುನಾಥ ಭಾಗವತ, ಕಾಳಿಂಗ ನಾವಡ, ಪುರುಷೋತ್ತಮ ಪೂಂಜ ಹಿಂಗೆ. ಇವರ ನಂತರ ಬಾಗವತರ್ ಸುಮಾರ್ ಜನ ಬಂದೊಳೊ. ಇವರ ಪೈಕಿ ಬಾಗವತರೂ ಆಗಿ ಕವಿಯೂ ಆಗಿ ಹೆಸರ್ ಮಾಡ್ದವು ಇಲ್ಲೆಂತನೇ ಹೇಳಕ್. ಆದರೆ ಅರೆಬಾಸೆ ಜನಾಂಗದ ಬಾಗ್ಯ ಕಂಡದೆ ಭವ್ಯಶ್ರೀ ಬಾಗವತರೂ ಹೌದು, ಕವಯತ್ರಿಯೂ ಹೌದು. ರಂಗ ಪ್ರಯೋಗಕ್ಕೆ ಯಾವುದೇ ರೀತಿ ಲೋಪ ಬಾರದ ರೀತಿಲಿ ಅವು ಈ ಆರ್ ಪ್ರಸಂಗನ ಅರೆಬಾಸೆಲಿ ಬರ್ದೊಳೊ.

ಬರ್ದ್‌ರೆ ಸಾಲದ್. ಅದರ ಪ್ರಿಂಟ್ ಮಾಡೊಕಲ್ಲಾ? ಈ ಎಲ್ಲ ಪ್ರಸಂಗಗಳ್‌ನ ಮುದ್ರಿಸಿ ಕವಯತ್ರಿಯ ಪ್ರಯತ್ನ ಮತ್ತೆ ಆಸೆಗೆ ಒಂದು ಸಾಸ್ವತ ನೆಲೆ ಒದಗಿಸಿದವು ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತ್ ಸಾಹಿತ್ಯ ಅಕಾಡೆಮಿಯವು. ಈ ಸಾಲ್‌ನ ಅಕಾಡೆಮಿಯ ಎಲ್ಲ ಸದಸ್ಯರ್‌ಗೂ ಒಂದು

ಸಾಂಸ್ಕೃತಿಕ ಅಬಿರುಚಿ ಇರ್‌ದು ಅಬಿಮಾನದ ಸಂಗತಿ. ಅಕಾಡೆಮಿ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆಯವು ಈ ಗಳಿಗೆನ ಪ್ರಚಾರಕ್ಕಿಂತ ಹೆಚ್ಚ್ ಜನಾಂಗದ ಬವಿಷ್ಯದ ಬಗ್ಗೆ ವಿಚಾರ ಮಾಡುವ ಮುತ್ಸದ್ದಿತನದ ಯೋಚನೆ ಇರೋವು. ಅವರ ದೂರದೃಸ್ಟಿ ಮತ್ತೆ ಶ್ರದ್ದೆಂದ ಅಕಾಡೆಮಿಯ ಕೆಲಸಕ್ಕೆ ಇನ್ನ್ ಮುಂದಕ್ಕೂ ಒಂದ್ ರಾಜಮಾರ್ಗ ಸಿಕ್ಯುಟುತ ನನ್ನ ಪ್ರಾಮಾಣಿಕ ಅಬಿಪ್ರಾಯ. ಹಾಂಗಾಗಿಯೇ ಈ ಆರ್ ಪ್ರಸಂಗಕ್ಕೆ ಪುಸ್ತಕ ರೂಪ ಪಡಿವ ಬಾಗ್ಯ ಬಾತ್.

ಗೌಡ ಜನಾಂಗಲಿ ಸಂಗೀತ, ಶಿಲ್ಪ, ಚಿತ್ರ, ನೃತ್ಯ, ನಾಟಕ ಇಂತದಕ್ಕೆ ಪ್ರೋತ್ಸಾಹ ಕಮ್ಮಿ. ಲಲಿತಕಲಾ ಕ್ಷೇತ್ರಲಿ ಜನಾಂಗದವು ಹೆಜ್ಜೆ ಇಸಿದಸ್ಟೆ. ನಡಿಯಕೆ ಇನ್ನ್ ಸುಮಾರ್ ಉಟ್ಟು. ಈ ದೃಸ್ಟಿಂದ ಈ ಆರ್ ಪ್ರಸಂಗಗಳ ಮುದ್ರಣ ಮತ್ತೆ ರಂಗಪ್ರಯೋಗ ಸಾಂಸ್ಕೃತಿಕ ರಂಗಲಿ ಅರೆಬಾಸಿಗರ್ ತೊಡಗಿಸಿಕೊಳ್ತಾ ಇರುದರ ಸುಬ ಸೂಚನೆತ ನಂಗೆ ಕಂಡದೆ.

**ಸುಬ್ರಾಯ ಸಂಪಾಜೆ**
ಆಕಾಶವಾಣಿ, ಮಡಿಕೇರಿ

# ಪ್ರಸ್ತಾವನೆ

ದೈವೀಕಲೆಯಾದ ಯಕ್ಷಗಾನದಲ್ಲಿ ಭಾಗವತಿಕೆ ನಡೆಸುವ ಅಪೂರ್ವ ಅವಕಾಶ ನನಗೆ ದೊರೆತದ್ದು ಪುಣ್ಯವೆಂದೇ ನಾನು ಭಾವಿಸುತ್ತೇನೆ. ನೂರಾರು ವರ್ಷಗಳಿಂದ ಹಿರಿಯ ಕಲಾವಿದರ ತ್ಯಾಗ, ಶ್ರಮದಿಂದ ನೇರ್ಪುಗೊಂಡ ಯಕ್ಷಗಾನ ಇಂದು ಲಿಂಗ ಭೇದವಿಲ್ಲದೆ ವಿಶ್ವವ್ಯಾಪಿ ಬೆಳೆದಿದೆ. ಹವ್ಯಾಸಿ ಭಾಗವತಳಾದ ನಾನು ನಮ್ಮ ದೇಶದ ಶ್ರೇಷ್ಠ ಮತ್ತು ಶ್ರೀಮಂತ ಕಲೆಯಾದ ಯಕ್ಷಗಾನದ ಪ್ರಸಂಗವನ್ನು ರಚಿಸುತ್ತೇನೆ ಎಂಬ ಕನಸು ಕಂಡವಳೂ ಅಲ್ಲ. ಆದರೆ 2020ರಲ್ಲಿ ಕೊರೋನಾ ಎಂಬ ಮಹಾಮಾರಿ ವಕ್ಕರಿಸಿ ದೇಶಾದ್ಯಂತ ಲಾಕ್ಡೌನ್ ಆದಾಗ ಎಲ್ಲರಂತೆ ನಾನೂ ಮನೆಯಲ್ಲಿ ಕೂರಬೇಕಾಯಿತು.

ಮನೆಯಲ್ಲಿ ಖಾಲಿ ಕುಳಿತ ನನಗೆ ಛಂದೋಬದ್ಧವಾಗಿ ಯಕ್ಷಗಾನ ಪದರಚನೆಯ ಮನಸ್ಸಾಯಿತು. ಮೊದಲಿಗೆ ಸಾಂಗತ್ಯ ಬಂಧದಲ್ಲಿ ಯಕ್ಷಮಾತೆ ಕಟೀಲು ಶ್ರೀ ದುರ್ಗಾಪರಮೇಶ್ವರಿಯ ಕುರಿತು ಬರೆಯುವ ಪ್ರಯತ್ನ ನಡೆಸಿದೆ. ಛಂದೋಬದ್ಧವಾಗಿ ಪದಗಳನ್ನು ಪೋಣಿಸಲಾಗದೇ ಕೈಚೆಲ್ಲಿ ಕುಳಿತೆ. ಆದರೂ ಹಠ ಬಿಡದೆ ಛಂದಸ್ಸಿನ ಗುರುಗಳಾದ ಪ್ರಸಂಗಕರ್ತ ಗಣೇಶ ಕೊಲೆಕಾಡಿ ಅವರ ಪ್ರೇರಣೆಯಿಂದ ರಾತ್ರಿಯೆಲ್ಲ ನಿದ್ದೆಗೆಟ್ಟು ಮೊದಲ ರಚನೆಯನ್ನು ಬರೆದು ಪೂರೈಸಿದೆ. ಅಂಜಿಕೆಯಿಂದಲೇ ಗುರುಗಳಿಗೆ ತೋರಿಸಿ ಅವರ ಕೈಯಿಂದ ಬೈಸಿಕೊಂಡು ಮತ್ತೆ ತಿದ್ದಿ ತಿದ್ದಿ ರಚನೆಗೆ ಹೊಸ ರೂಪಕೊಟ್ಟೆ. ಬಳಿಕ ವಿವಿಧ ಬಂಧಗಳ ರಚನೆ ನಡೆಸಿದೆ.

ಹೀಗೆ ಒಂದೊಂದೆ ರಚನೆಯನ್ನು ಫೇಸ್‌ಬುಕ್‌ಗೆ ಅಪ್ಲೋಡ್ ಮಾಡಿದಾಗ ಸಹೃದಯರು, ಯಕ್ಷಗಾನ ಅಭಿಮಾನಿಗಳು

ಪ್ರೋತ್ಸಾಹದ ಮಾತುಗಳನ್ನಾಡಿದರು. ಫೇಸ್‌ಬುಕ್‌ನಲ್ಲಿ ನಾನು ಹಾಕಿದ ರಚನೆಗಳು ಅರೆಭಾಷೆಯಲ್ಲಿ ಮೊದಲ ಛಂದೋಬದ್ಧ ಯಕ್ಷಗಾನ ಪ್ರಸಂಗ ರಚನೆಗೆ ಪ್ರೇರಣೆಯಾಯಿತು. ಸುಳ್ಯ, ಪುತ್ತೂರು, ಕಾಸರಗೋಡು ಮತ್ತು ಕೊಡಗು ಜಿಲ್ಲೆಯ ಕೆಲ ಭಾಗಗಳಲ್ಲಿ ಆಡುಭಾಷೆಯಾಗಿರುವ ನನ್ನ ಮಾತೃಭಾಷೆ ಅರೆಭಾಷೆಯಲ್ಲಿ ಇದುವರೆಗೆ ಛಂದೋಬದ್ಧ ಯಕ್ಷಗಾನ ಪ್ರಸಂಗ ರಚನೆಯಾಗಿರಲಿಲ್ಲ. ಆಗಿದ್ದರೂ ನನ್ನ ಗಮನಕ್ಕೆ ಬಂದಿರಲಿಲ್ಲ. ಅರೆಭಾಷೆಯಲ್ಲಿ ತಾಳಮದ್ದಳೆ, ಯಕ್ಷಗಾನ ಪ್ರದರ್ಶನ ನಡೆದಿದ್ದರೂ ಪ್ರಸಂಗ ಸಾಹಿತ್ಯ ಕನ್ನಡದಲ್ಲೇ ಇತ್ತು. ಸುಳ್ಯ ಸುತ್ತಲಿನ ಪ್ರದೇಶದಲ್ಲಿ ಸಾಕಷ್ಟು ಮಂದಿ ಅರೆಭಾಷೆ ಮಾತನಾಡುವ ಉತ್ಸಾಹಿ ಮತ್ತು ಸೃಜನಶೀಲ ಯಕ್ಷಗಾನ ಕಲಾವಿದರು ಇದ್ದರೂ ಪ್ರೋತ್ಸಾಹದ ಕೊರತೆ ಇದೆ. ಅರೆಭಾಷೆಯಲ್ಲೇ ಯಕ್ಷಗಾನ ನಡೆಸಲು ಪ್ರಸಂಗ ಸಾಹಿತ್ಯದ ಕೊರತೆಯೂ ಇತ್ತು. ಈ ಕೊರತೆಯನ್ನು ನೀಗುವ ಮನಸ್ಸು ಮಾಡಿದ್ದು ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.

ಅರೆಭಾಷೆ ಅಕಾಡೆಮಿಯ ಯುವ ಉತ್ಸಾಹಿ ಅಧ್ಯಕ್ಷರಾಗಿರುವ; ಕಲೆ, ಸಂಸ್ಕೃತಿ ಬಗ್ಗೆ ಅಪಾರ ತುಡಿತ ಇರುವ ಲಕ್ಷ್ಮೀನಾರಾಯಣ ಕಜೆಗದ್ದೆ ಅವರ ದೂರದರ್ಶಿತ್ವದಿಂದ ಅರೆಭಾಷೆಯಲ್ಲಿ ಯಕ್ಷಗಾನ ಪ್ರಸಂಗ ಇಂದು ಸಾಕಾರಗೊಂಡಿದೆ. ಅರೆಭಾಷೆಯಲ್ಲಿ ಯಕ್ಷಗಾನ ಪ್ರಸಂಗ ರಚಿಸುವವರು ಯಾರು ಇದ್ದಾರೆ ಎಂದು ಲಕ್ಷ್ಮೀನಾರಾಯಣ ಕಜೆಗದ್ದೆ ಅವರು ಹುಡುಕುತ್ತಿದ್ದರು. ಈಗಾಗಲೇ ನನ್ನ ಕನ್ನಡ ರಚನೆಗಳನ್ನು ಗಮನಿಸಿದ್ದ ಅವರು ಮಡಿಕೇರಿ ಆಕಾಶವಾಣಿಯ ಹಿರಿಯ ಉದ್ಘೋಷಕರಾಗಿರುವ ಸುಬ್ರಾಯ ಸಂಪಾಜೆ ಮತ್ತು ಹಿರಿಯ

ಅರ್ಥಧಾರಿಗಳಾದ ಜಬ್ಬಾರ್ ಸಮೋ ಅವರ ಜೊತೆ ಮಾತನಾಡಿದರು. ಜಬ್ಬಾರ್ ಅವರು ನನ್ನನ್ನು ಮೊದಲು ಸಂಪರ್ಕಿಸಿ, ಅರೆಭಾಷೆಯಲ್ಲಿ ಯಕ್ಷಗಾನ ಪ್ರಸಂಗ ರಚಿಸಬೇಕು ಎಂದು ನನ್ನಲ್ಲಿ ವಿನಂತಿಸಿಕೊಂಡಾಗ ನನಗೇ ಆಶ್ಚರ್ಯವಾಗಿತ್ತು. ನನ್ನಿಂದ ಇದು ಸಾಧ್ಯವಿಲ್ಲ ಎಂಬ ಭಾವನೆ ಮೂಡಿ, ನನ್ನಿಂದಾಗದು ಅಂದುಬಿಟ್ಟೆ. ಕೆಲ ದಿನಗಳ ಬಳಿಕ 'ನಿಮ್ಮ ರಚನೆಗಳನ್ನು ಫೇಸ್‌ಬುಕ್‌ನಲ್ಲಿ ನೋಡಿದ್ದೇನೆ. ಪ್ರಯತ್ನಿಸಿ. ನಿಮ್ಮಿಂದ ಕನ್ನಡದಿಂದ ಅರೆಭಾಷೆಗೆ ಯಕ್ಷಗಾನ ಪ್ರಸಂಗಗಳ ಅನುವಾದ ಸಾಧ್ಯ' ಎಂದು ಸುಬ್ರಾಯ ಸಂಪಾಜೆ ಅವರು ಭರವಸೆಯ ಮಾತುಗಳನ್ನಾಡಿದರು. ಹಿರಿಯ ಕಲಾವಿದರಾದ ಜಬ್ಬಾರ್ ಸಮೋ ಸಂಪಾಜೆ ಅವರೂ ನನ್ನಲ್ಲಿ ಆತ್ಮವಿಶ್ವಾಸ ತುಂಬುವ ಮಾತುಗಳನ್ನು ಹೇಳಿದರು. ಬಳಿಕ ಗುರುಗಳ ಜತೆ ಸಮಾಲೋಚನೆ ನಡೆಸಿ, ಅವರ ಒಪ್ಪಿಗೆ ಪಡೆದು ಈ ಕಾರ್ಯಕ್ಕೆ ಮುಂದಡಿಯಿಟ್ಟೆ.

ಶರಸೇತು ಬಂಧನ ಪ್ರಸಂಗದ ಒಂದೆರಡು ಪದಗಳನ್ನು ಅರೆಭಾಷೆಗೆ ಅನುವಾದಿಸಿ ಭಾಗವತರೂ ಅಗಿರುವ ಸುಬ್ರಾಯ ಸಂಪಾಜೆಯವರಿಗೂ, ಜಬ್ಬಾರ್ ಅವರಿಗೂ ಕಳುಹಿಸಿದೆ. ಚೆನ್ನಾಗಿದೆ ಮುಂದುವರೆಸಿ ಎಂದು ಇಬ್ಬರೂ ಹೇಳಿದರು. ಸುಬ್ರಾಯ ಸಂಪಾಜೆಯವರಂತೂ ನನ್ನಿಂದ ಅನುವಾದ ಕೆಲಸವನ್ನು ಪೂರ್ಣಗೊಳಿಸಲು ಪಣತೊಟ್ಟರು. ಮೊದಲಿಗೆ ಕನ್ನಡದಿಂದ ಅರೆಭಾಷೆಗೆ ಐದು ಪ್ರಸಂಗಗಳನ್ನು ಅನುವಾದಿಸಿ ನೀಡಬೇಕು ಎಂದು ಕಜೆಗದ್ದೆ ಅವರು ವಿನಂತಿಸಿದರು. ಅವರ ಸೂಚನೆಯಂತೆ ಅಕಾಡೆಮಿಯ ಸರ್ವ ಸದಸ್ಯರ ಪ್ರೋತ್ಸಾಹ ದಿಂದ ತಾಳಮದ್ದಳೆಗೆ ಅನುಕೂಲವಾಗುವ ಶರಸೇತು ಬಂಧನ, ಪಂಚವಟಿ, ಕೃಷ್ಣಾರ್ಜುನ ಕಾಳಗ, ವಾಲಿವಧೆ;

ಬಯಲಾಟಕ್ಕೆ ಅನುಕೂಲವಾಗುವ ಕೃಷ್ಣಲೀಲೆ–ಕಂಸವಧೆ ಮತ್ತು ಇಂದ್ರಜಿತು ಕಾಳಗ ಪ್ರಸಂಗಗಳನ್ನು ಕನ್ನಡದಿಂದ ಅರೆಭಾಷೆಗೆ ಅನುವಾದಿಸಿದ್ದೇನೆ.

ಇದು ಪರಿಪೂರ್ಣವಲ್ಲ ಎಂಬ ಅರಿವು ನನಗಿದೆ. ಅರೆಭಾಷೆಯಲ್ಲಿ ಅರ್ಧಾಕ್ಷರ ಪದಗಳ ಬಳಕೆ ಹೆಚ್ಚು ಇರುವುದರಿಂದ ಅವುಗಳನ್ನು ಛಂದಸ್ಸಿಗೆ ಹೊಂದಿಸುವುದು ಕಷ್ಟದ ಕೆಲಸ. ಹಾಗಾಗಿ ಕೆಲವೆಡೆ ಲೋಪ ಆಗಿರಲೂಬಹುದು. ಇದು ಅರೆಭಾಷೆಯಲ್ಲಿ ಯಕ್ಷಗಾನ ಪ್ರಸಂಗದ ಸಾಧ್ಯತೆ ಮಾತ್ರ. ವಿದ್ವಾಂಸರು, ಛಂದಸ್ಸು ಕಲಿತವರು ಅರೆಭಾಷೆಯಲ್ಲಿ ಇನ್ನಷ್ಟು ಸ್ಪಷ್ಟ ಮತ್ತು ಪರಿಣಾಮಕಾರಿಯಾಗಿ ಪ್ರಸಂಗ ರಚಿಸಬಹುದು. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಪ್ರಯತ್ನದಿಂದಾಗಿ ಈಗ ಅರೆಭಾಷೆಯಲ್ಲಿ ಯಕ್ಷಗಾನ ಪ್ರಸಂಗವಿಲ್ಲ ಎಂಬ ಕೊರತೆ ನೀಗಿದೆ. ಇನ್ನು ಈ ಪ್ರಸಂಗಗಳು ತಾಳಮದ್ದಳೆ ಮತ್ತು ಯಕ್ಷಗಾನ ರೂಪದಲ್ಲಿ ಪ್ರದರ್ಶಗೊಂಡರೆ ಮಾತ್ರ ಅಕಾಡೆಮಿಯ ಈ ಪ್ರಯತ್ನ ಸಾರ್ಥಕಗೊಳ್ಳುತ್ತದೆ.

ಮಡಿಕೇರಿಯಲ್ಲಿ 2020ರ ಡಿಸೆಂಬರ್ ತಿಂಗಳಲ್ಲಿ ಪ್ರದರ್ಶನಗೊಂಡ ಪಂಚವಟಿ ಪ್ರಸಂಗದ ತಾಳಮದ್ದಳೆ ಹಾಗೂ ಸುಳ್ಯದಲ್ಲಿ ಪ್ರದರ್ಶನಗೊಂಡ ಕಂಸವಧೆ ಬಯಲಾಟ ಜನಮೆಚ್ಚುಗೆ ಗಳಿಸಿದೆ.

ಸಂಪೂರ್ಣ ಅರೆಭಾಷೆಯ ಮೊದಲ ತಾಳಮದ್ದಳೆಯಲ್ಲಿ ಪಾಲ್ಗೊಂಡ ಜನಪ್ರಿಯ ಕಲಾವಿದರಾದ ಕೊಳ್ತಿಗೆ ನಾರಾಯಣ ಗೌಡ, ಜಬ್ಬಾರ್ ಸಮೊ, ಸಂಪಾಜೆ ಮತ್ತು ಜಯಾನಂದ ಸಂಪಾಜೆ ಅವರನ್ನು ಈ ಸಂದರ್ಭದಲ್ಲಿ ನಾನು ಗೌರವಪೂರ್ವಕ ನೆನಪು ಮಾಡಿಕೊಳ್ಳುತ್ತೇನೆ. ಅರೆಭಾಷೆ ಮಾತನಾಡುವ ಗೌಡ ಜನಾಂಗದವರು ಹಾಗೂ ಇತರ ಜಾತಿ, ಜನಾಂಗದವರು

ಅರೆಭಾಷೆ ಯಕ್ಷಗಾನದ ಸಂಘಟನೆ, ಪ್ರಾಯೋಜಕತ್ವ ವಹಿಸಿ ಕಾರ್ಯಕ್ರಮಗಳನ್ನು ನಡೆಸಿದರೆ ಈ ಪ್ರಯತ್ನ ಫಲ ನೀಡುತ್ತದೆ. ಅರೆಭಾಷೆಯ ಬೆಳವಣಿಗೆಗೆ ಕಾರಣವಾಗುತ್ತದೆ. ಅರೆಭಾಷೆ ತಾಳಮದ್ದಳೆ ಮತ್ತು ಯಕ್ಷಗಾನದ ಪ್ರಯೋಗಗಳು ಅಧಿಕ ಸಂಖ್ಯೆಯಲ್ಲಿ ನಡೆದಾಗ ಅರೆಭಾಷೆ ಬೆಳೆಯುವ ಜತೆಗೆ ಇತರ ಭಾಷಿಗರು ನಮ್ಮತ್ತ ಕಣ್ಣೆತ್ತಿ ನೋಡುವಂತೆ ಮಾಡಬಹುದು. ಇದಕ್ಕೆಲ್ಲಾ ಅರೆಭಾಷಿಗರು ಮನಸ್ಸು ಮಾಡಬೇಕಷ್ಟೆ.

ನನ್ನ ಮೊದಲ ಪುಸ್ತಕವಾಗಿ ಅರೆಭಾಷೆಯಲ್ಲಿ ಯಕ್ಷಗಾನ ಪ್ರಸಂಗದ ಕೃತಿ ಹೊರಬರುತ್ತಿರುವ ಸಂದರ್ಭ ನನ್ನ ಗುರುಗಳನ್ನು ನೆನಪಿಸಿಕೊಳ್ಳಲೇಬೇಕು. ನನಗೆ ಭಾಗವತಿಕೆಯ ಮೊದಲ ಪಾಠ ಮಾಡಿದವರು ಯಕ್ಷಗಾನದ ಮೊದಲ ಮಹಿಳಾ ಭಾಗವತರು ಎನಿಸಿಕೊಂಡ ಮಂಡೆಕೋಲು ಗ್ರಾಮದವರಾದ ದಿ. ನರ್ಮದಾ ಶಿಬರೂರಾಯ ಅವರು. ಬಳಿಕ ಹಿರಿಯ ಗುರುಗಳು ಮತ್ತು ಭಾಗವತರಾದ ವಿಶ್ವವಿನೋದ ಬನಾರಿ ಅವರು ಭಾಗವತಿಕೆ ಕಲಿಸಿ ನಾನು ವೇದಿಕೆ ಏರುವಂತೆ ಮಾಡಿದವರು. ಅರೆಭಾಷೆ ಪ್ರಸಂಗ ಬರೆಯುವಲ್ಲಿಯೂ ಅವರು ಪ್ರೋತ್ಸಾಹ ನೀಡಿದ್ದಾರೆ. ನಾನು ಯಕ್ಷಗಾನ ಭಾಗವತಿಕೆಯ ಹೆಚ್ಚಿನ ಅಭ್ಯಾಸ ಹಾಗೂ ಛಂದಸ್ಸಿನ ಜ್ಞಾನ ಪಡೆದದ್ದು ಛಂದೋವಾರಿಧಿಚಂದ್ರ ಬಿರುದಾಂಕಿತ ಯಕ್ಷಗಾನ ಗುರು ಹಾಗೂ ಪ್ರಸಂಗಕರ್ತರಾದ ಗಣೇಶ ಕೊಲೆಕಾಡಿ ಅವರಿಂದ. ಗುರು ಗಣೇಶ ಕೊಲೆಕಾಡಿ ಅವರಿಂದ ಕಲಿತ ಛಂದಸ್ಸಿನ ಬಲದಿಂದಲೇ ನಾನು ಅರೆಭಾಷೆಯಲ್ಲಿ ಯಕ್ಷಗಾನ ಪ್ರಸಂಗ ರಚಿಸಲು ಸಾಧ್ಯವಾಯಿತು. ಅರೆಭಾಷೆಯ ಪ್ರಸಂಗ ಬರೆದ ಬಳಿಕ ಅದೇ ಕಾರಣದಿಂದ ಕನ್ನಡ ಪ್ರಸಂಗವೊಂದನ್ನು ಬರೆಯುವ ಅವಕಾಶವೂ ದೊರಕಿತು. ಬೆಳ್ತಂಗಡಿಯ ಕಾಟಾಜೆ ಶ್ರೀ ದುರ್ಗಾಪರಮೇಶ್ವರೀ

ದೇವಸ್ಥಾನದ ಬ್ರಹ್ಮಕಲಶದ ಅಂಗವಾಗಿ 'ಶ್ರೀ ಕಾಟಾಜೆ ಕ್ಷೇತ್ರ ಮಹಾತ್ಮೆ' ಪ್ರಸಂಗವನ್ನು ರಚಿಸಿದೆ. ಬ್ರಹ್ಮಕಲಶದ ಪ್ರಯುಕ್ತ 2021ರ ಮಾರ್ಚ್‌ನಲ್ಲಿ ಅದು ಯಶಸ್ವೀ ಪ್ರದರ್ಶನ ಕಂಡಿತು.

ಈ ಸಂದರ್ಭದಲ್ಲಿ ನನ್ನ ಎಲ್ಲ ಗುರುಗಳಿಗೆ ನಮನಗಳನ್ನು ಸಲ್ಲಿಸುತ್ತೇನೆ. ನನ್ನನ್ನು ಹೆತ್ತು ಸಾಕಿ ಸಲಹಿದ, ಮಕ್ಕಳಿಗಾಗಿಯೇ ತನ್ನ ಜೀವ ತೇಯ್ದು ನನ್ನ ಅಮ್ಮ ದಿ. ರುಕ್ಮಿಣಿ ಅವರನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ. ಯಕ್ಷಗಾನದ ಹುಚ್ಚು ಹತ್ತಿಸಿ, ಗುರುಗಳ ಬಳಿ ಪ್ರತಿದಿನ ಕರೆದೊಯ್ದು ನಾನು ಭಾಗವತಳಾಗಲು ಕಾರಣರಾದ, ಯಕ್ಷಗಾನ ಭಾಗವತಿಕೆಯಲ್ಲಿ ನಾನು ದೊಡ್ಡ ಹೆಸರು ಮಾಡಬೇಕು ಎಂದು ಸದಾ ಹೇಳುತ್ತಿದ್ದ ನನ್ನ ಅಜ್ಜ ದಿ. ರಾಮಪ್ಪ ಗೌಡ ಅವರನ್ನು ಸ್ಮರಿಸುತ್ತೇನೆ.

ಈ ಪುಸ್ತಕ ಹೊರಬರಲು ಮೂಲ ಕಾರಣಕರ್ತರಾದ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ, ಸರ್ವ ಸದಸ್ಯರು, ರಿಜಿಸ್ಟ್ರಾರ್ ಅವರಿಗೆ ಕೃತಜ್ಞತೆಗಳು. ನನ್ನನ್ನು ಈ ಕಾರ್ಯಕ್ಕೆ ಸೂಚಿಸಿ, ತಮ್ಮ ಕೆಲಸದ ಒತ್ತಡಗಳ ನಡುವೆಯೂ ಬರೆಯಲು ಕ್ಷಣ ಕ್ಷಣವೂ ಸ್ಫೂರ್ತಿ ನೀಡಿ, ಪ್ರತಿ ಪ್ರಸಂಗಗಳ ಕರಡು ತಿದ್ದಿದ ಭಾಗವತರಾದ ಸುಬ್ರಾಯ ಸಂಪಾಜೆ ಅವರಿಗೆ ಧನ್ಯವಾದಗಳು. ಪ್ರೋತ್ಸಾಹಿಸಿದ ಜಬ್ಬಾರ್ ಸಮೋ ಸಂಪಾಜೆ ಮತ್ತು ನಾನು ಕನ್ನಡ ಪದ ಬಳಸಿದಾಗ ಅರೆಭಾಷೆಯ ಪದಗಳನ್ನು ಸೂಚಿಸಿದ ಉಪನ್ಯಾಸಕರಾದ ಡಾ. ಕರುಣಾಕರ ನಿಡಿಂಜಿ ಅವರಿಗೆ ವಂದನೆಗಳು. ಪ್ರಸಂಗ ರಚನೆ ಹಾಗೂ ಪುಸ್ತಕ ಹೊರತರುವಲ್ಲಿ ಪ್ರೋತ್ಸಾಹ, ಸಹಕಾರ ನೀಡಿದ ಸರ್ವರನ್ನೂ ಮನಃಪೂರ್ವಕ ನೆನೆಯುತ್ತೇನೆ.

**ಭವ್ಯಶ್ರೀ ಕುಲ್ಕುಂದ**

# ಪರಿವಿಡಿ

# ಪಂಚವಟಿ

**॥ ಸೌರಾಷ್ಟ್ರ ತ್ರಿವುಡೆ ॥**

ನೋಡಿಲಾಯ್ಕ್ನ ನೀರ್ ಜಾಗೆಲಿ ।
ಮಾಡಿಕೊಂಡಳ ಎಲೆನ ಮನೆಗಳ ॥
ನಾಡದೊರೆಗವು ಪಂಚವಟಿನ। ಕಾಡ ನಡುಲಿ ॥ ೧ ॥

ವನಲಿ ಸಿಕ್ಕುವ ಕಾಯಿ ಹಣ್ಣ್ನ ।
ದಿನಲು ಲಕ್ಷ್ಮಣ ತಂದ್ ಕೊಟ್ಟದೆ ॥
ದಿನಗ ಹೋತಿದ್ದೊ ಹೀಂಗೆ ಮೂರೂ ।
ಜನರ್ದ್ ಕಾಡ್‌ಲಿ ॥ ೨ ॥

ಒಂದ್ ದಿನ ಅಲ್ಲಿರುವ ಋಷಿಗಾ ।
ಬಂದ್ ರಾಮನ ಕಾಲ್ ಹಿಡ್ಕಂಡ್ ॥
ಬಂದ ಕಷ್ಟನ ದೂರ ಮಾಡೊಕು ।
ತಂದ್ ಹೇಳ್ದೊ ॥ ೩ ॥

**॥ ಶಂಕರಾಭರಣ ಏಕ ॥**

ಕೇಳ್ ರಾಮ ಹೇಳ್ವ ಕತೆನ । ಹಾಳ್ ರಕ್ಕಸರ್‌ಗ ಯಜ್ಞ।
ಶಾಲೆನ್ನೆಲ್ಲ ಕಿತ್ತ್ ಓಡಿ । ಸೊಳೊಯ ನಮ್ಮನ್ ॥ ೧ ॥

ಮತ್ತೆ ರಕ್ಕಸೊಬ್ಬ ದೂರ । ನಿತ್ತ್ ಕಲ್ಲ್ ಹೊಡ್ದ್ ಬುಟ್ಟು ।
ಹತ್ತ್ ಗಾಯ ಮಾಡಿ ಮೂಗ್‌ಲಿ । ರಕ್ತ ಬರ್ಸಿತ್ ॥ ೨ ॥

ಮೂರು ತಲೆನ ದೊಡ್ಡ ದೈತ್ಯ । ನಾರ್ ಬಟ್ಟೆ ಎಳ್ದ್ ಜಪದ ।
ಹಾರನೆಲ್ಲ ತುಂಡು ಮಾಡ್ತ್ । ದಾರಿ ಕಾಣ್ತಿಲೆ ॥ ೩ ॥

॥ **ವಾರ್ಧಿಕ** ॥

ದೂರುಗಳ ಕೇಳಿ ರಘುರಾಮ ಮನಸಿನಲೆ ನಗ್ತ್ ।
ಯಾರ್ ಹೆದರುದು ಬೇಡತೇಳಿ ನಂಬುಗೆ ಕೊಟ್ಟ್ ॥
ಚೂರುದಿನಲೀ ಕೆಟ್ಟ ರಕ್ಕಸರ ಮುಗ್ಸಿನಾ ಕಾದನೆತ ಹೇಳ್ತವ್ನು
॥ ೧/೨ ॥

॥ **ಶಂಕರಾಭರಣ ಏಕ** ॥

ತಾವ್ರೆ ಕಣ್ಣೋವ್ನೇ ಕೇಳ್ ಮುಂದೆ ।
ಬಾರಿ ದೊಡ್ಡ ಕಾಡ್‌ಟ್ಟುಗಡ ॥
ಘೋರ ರಕ್ಕಸರ್ಗ ಉರಿಲಿ । ಹಾರ್ತೋಳಗಡಯ ॥ ೧ ॥

ಹಿಂದೆ ತುಂಬ ರಕ್ಕಸಿನವು ।
ಬಂದವರ ಕಾಡಿಸಿ ಕೊಂದೊಳಯ ॥
ಹಿಂದೆ ಪೋಯಿ ಬೇಡ ಇಲ್ಲಿ । ಮುಂದೆ ಕಷ್ಟಾದು ॥ ೨ ॥

ಕತ್ತಲಾಕನೊಬ್ಬ ದೈತ್ಯ । ಹತ್ತ್ ಮಂಡೆ ಕೈಯಿಪ್ಪತ್ತ್ ॥
ಹೊತ್ತ್ ತಿರ್ಗಾಡ್ಕಂಡುಟ್ಟುಗಡ । ಮತ್ತ್ ತುಂಬಿನೇ ॥ ೩ ॥

ಮತ್ತೆ ಅವಗೆ ಹೆಣ್ಣ್ ತೇಳ್ವ । ಪಿತ್ಥ ತಲೆಗೇರಿಟುಯ ಬೇಡ ॥
ಇತ್ತ ಬಂದ್ ಕೆಟ್ಟ್ ಹೋದೊ । ಸತ್ಯವಂತನೆ ॥ ೪ ॥

॥ **ವಾರ್ಧಿಕ** ॥

ಕೇಳಿತಾಗಲೆ ಭಾರಿ ದಾನವರ ಗದ್ದಲನು ।
ಹೇಳ್ತ್ ಧೈರ್ಯನ ರಾಮ ಜನಕ ಮಗಳಿಗೆಯಂದ್ ॥
ಏಳ್ತ್ ಬಿಲ್ ಬಾಣ ಹಿಡ್ಕಂಡ್ ಶೌರ್ಯಲಿ ಕೋಪ
ತಲೆಗೇರಿ ಕಿಡಿಕಾರ್ತಲೆ ॥ ೧/೨ ॥

ಭೋರ್ಗರೆವ ಕಡಲಂಗೆ ಬೊಬ್ಬಿರಿತ ರಕ್ಕಸರ್ ।
ಏರಿಳಿತದಬ್ಬರದ ಗಮಕದಾರ್ಭಟೆ ಕೊಡ್ತಾ ।
ಭಾರಿ ಸಿಡಿಲೇಬಿತ್ತ್ ಎಂಬಂಗೆ ಕೂಗಾಡ್ತ ಬಾತಾಗ
ಶೂರ್ಪನಖಿನು ॥ ೧/೨ ॥

॥ **ಕಲ್ಯಾಣಿ ಅಷ್ಟ** ॥

ಯಾರಿಯಾ ಮನ್ಸ । ಈ ವನಕೆ ಬಂದವ ।
ಯಾರಿಯಾ ಮನ್ಸ ॥ ಪ ॥
ಬಾರಿ ಲಾಯ್ಕ್ನ ಮೈನ ವಾಸನೆ ।
ಭಾರಿ ಘಮ ಘಮ ಬರ್ತುಟಬಬಾ ।
ವೀರರೆಲ್ಲರ್ ಬನ್ನಿ ಪೋಯಿಯ ।
ಚೂರು ಉಳ್ಸದೆ ತಿಂದ್ ಬುಡಮ ॥ ೧ ॥

॥ **ಸೌರಾಷ್ಟ್ರ ತ್ರಿವುಡೆ** ॥

ಕೂಡಿ ಎಲ್ಲರು ಕೊಚ್ಚಿ ಮಾಂಸನ ।
ಮಾಡಿ ನುಂಗಮ ಹೊಟ್ಟೆ ತುಂಬಾ ॥
ಆಡಿ ಕುಣಿಯಮ ಬಾರಿ ಗದ್ದಲ । ನಾವ್ಗೆ ಇಂದ್ ॥ ೧ ॥

ಇಷ್ಟು ಸಮಯಲಿ ಯಾವನೊಬ್ಬ ।
ಥಟ್ಟ ನುಗ್ಗೀ ಬಾತ್ಲೆಯಿಲ್ಲಿಗೆ ॥
ಕುಟ್ಟಿ ಕೊಂದನೆ ಬಂದ ಮನ್ಸನ । ಗಟ್ಟಿಗಿತ್ತಿ ॥ ೨ ॥

॥ **ಶಂಕರಾಭರಣ ರೂಪಕ** ॥

ರಾಘವ ನೀ ನನ್ನ ಬುಟ್ಟುಹೋಬಡಯೆಲ್ಲು ।
ಈಗ ಬಂದದೆ ರಾಕ್ಷಸೀ ॥
ಕೂಗಿದೆ ಗಂಟ್ಲೇ ಹರ್ದೋವಂಗೆ ।
ಬೇಗ ಯೇನಾರ್ ಮಾಡ್ ॥ ೧ ॥

ಲಕ್ಷ್ಮಣ ಯೆಲ್ಲುಟ್ಟೊ ರಕ್ಕಸಿ ಸಿಕ್ಕುಟೋ ।
ರಕ್ಷಿಸ್ ರಾಮ ನಮ್ಮ ॥
ಶಿಕ್ಷಿಸಿ ಕೊಂದೆ ಬುಟ್ಟುದ್ ನಮ್ಮ ಮೂವರ ।
ಮುಕ್ಕಿಯೆ ಬುಟ್ಟದೆನೋ ॥ ೨ ॥

॥ **ಶಹನಾ ಏಕ** ॥

ಅಂಜಿಕೆ ಬುಡುಸೀತೆ ಜನಕನ ಕುಲಜಾತೆ ।
ಅಂಜುವ ಪುಕ್ಕಲ ನಾನಲ್ಲಯಾ ॥
ಹಿಂಜರಿಯದೆ ಕೊಂದೆ ಬುಟ್ನೆ ಕೆಟ್ಟವ್ಳಾ ।
ಬಂಜೆ ಮಾತಲ್ಲ ನೋಡೀಗ ನೀನ್ಯಾ ॥ ೧ ॥

ಕಣ್ಣ್ ಮುಚ್ಚಿಕ ನೀನ್ ಕಂಡರೆ ಹೆದರ್ಕಂಬ ।
ಹೆಣ್ಣ್ ಜಾತಿನ ಮೂಳಿ ಉರ್ಕೊಳ್ಳಿ ನಾ ॥
ಮಣ್ಣ್ ಮುಕ್ಕಿಸಿಬುಟ್ಟ್ ನಿಮ್ಮ ರಕ್ಷಣೆ ಮಾಡ್ನೆ ।
ಇನ್ನ್ ಚಿಂತೆನ ಮಾಡ್ದು ನೀ ಬುಡ್ವನಾ ॥ ೨ ॥

**॥ ಶಹನಾ ಏಕ ॥**

ಕಂಡರೆ ಮನ್ಮಥ ದೇವ್ರ ಚಂದದ ರೂಪ ।
ಗಂಡೆದೆ ನೋಡಿರೆ ಏರ್ದೆನ್ನ ತಾಪ ॥
ಮೊಂಡುತ ನನ ತೋರ್ಸಿ ಕಳ್ಕಂದ್ಲೆ ಇವ್ನ ॥
ಕೊಂಡ್ಹೋಗಿ ಮನೆಗೆನ್ನ ಗಂಡಾಂತ ಹೇಳ್ನ ॥ ೧ ॥

**॥ ದ್ವಿಪದಿ ॥**

ಕೆಟ್ಟಬುದ್ಧಿಲಿ ಯೋಚನೆನ ಮಾಡ್ತ್ ಆಗ ॥
ಗಟ್ಟಿ ದೇಹನ ತಗ್ಸಿ ಮರೆಮಾಡ್ತ್ ಬೇಗ ॥ ೧ ॥

ಮಾಯವಿದ್ಯೆಲಿ ಮತ್ತೆ ಹೊಸ್ತಾದ ವೇಷ ।
ಮಾಯಾವಿ ಹಾಕಿ ಮಾಡ್ತವಗಾಗ ಮೋಸ ॥ ೨ ॥

ಹದಿನಾರ್ ವರ್ಷದಾ ಗೂಡೆಯಾತವುಳ್ ।
ಅದಕೊಪ್ಪ ಸಿಂಗರನ ಮಾಡಿ ಕುಸಿಲವುಳ್ ॥ ೩ ॥

ಮದ್ದಾನೆನಂಗೆ ಮೆಲ್ಲನೆ ನಡೆತ ಬಾತ್ ।
ಸದ್ದಿಲ್ದೆ ರಾಘವನ ಹತ್ರ ನಿತ್ಕಣ್ತ್ ॥ ೪ ॥

ಮನಸೋತ್ ರಾಮಂಗೆ ಕೈಮುಗ್ದ್ ನಿಂತ್ ।
ವಿನಯಲೀ ಭಾವನೆನ ಹೇಳ್ಕೆ ಸುರು ಮಾಡ್ತ್ ॥ ೫ ॥

**॥ ಗೌಳ ಆದಿ ॥**

ರಾಘವ ನೀನನ್ನ ಮಾತ್ ಕೇಳ್ವನಯಾ ॥
ನೀ ಗುಣವಂತತಾ ನಿನ್ನ ಹಕ್ಕಳೆ ಬಂದೆ ॥
ಅತಿಕುಲವತಿ ನಾನ್ । ಪೃಥಿವಿ ಪಾಲಕ ನೀನ್ ।
ರತಿರೂಪಿಯೇ ನಾನ್ । ಮನುಮಥ ನೀನ್ ॥ ೧ ॥

ಎರಡ್ ಮೊನ್ಸ್‌ನ ಬುಟ್ಟ್ ಕರುಣೆಲಿ ಕೆಬಿಕೊಟ್ಟ್ ।
ಉರಿನಾ ನೀ ತಣ್ಸಿಕೆ ಸರಸ ಮಾತಾಡ್ ॥
ತಿರ್‌ಗಾಡಿ ಹುಡ್‌ಕಿದೆ ಮೊನ್ಸ್‌ನ ಕದ್ದಂತ ।
ಸರಿಯಾದ ಹೈದಂಗ ಸಿಕ್ಕಿತ್ಲೆ ನೋಡ್ ॥ ೨ ॥

**॥ ಮಧ್ಯಮಾವತಿ ಏಕ ॥**

ಮದನನ ಪಟ್ಟದ ರಾಣಿ ನೀ ಕೇಳಿಯ ।
ಮೊದಲೆ ನೀ ಬಾತಿದ್ರೆ ನಿನ್ನ ಕೂಡ್ತೀದ್ದೆ ॥
ಮದುವೆಯಾಗೋವುಟು ನೀ ಬರೋ ಹೊತ್ತಿಗೆ ।
ಇದಲ್ಲದಿದ್ದರೆ ನಾನೆ ಮೊದುವೆಯಾಗ್ತೀದ್ದೆ ॥ ೧ ॥

ನನ್ನಿಂದ ನೂರ್ಪಟ್ಟ್ ನೋಡಿಕೆ ಚೆಲುವ ।
ಇನ್ನು ಮೊದ್ವೆನೆ ಯಾತ್ಲೆ ನಂಗವ ತಮ್ಮ ॥
ನಿನ್ನಾಸೆ ಹೇಳಿಕ ವಂಚನೆಯಿಲ್ಲದೆ ।
ನಿನ್ನುಪಾಯನ ತೋರ್ಸಿ ಮನ ಒಲ್ಸಿಕಮ್ಮ ॥ ೨ ॥

**॥ ಕಲಾವತಿ ರೂಪಕ ॥**

ಚಂದಲಂದ್ ಬಾತ್ ಕುಸಿಲಿ ಕಳ್ಳೆ ರಕ್ಕಸಿ ।
ಸುಂದರಾಂಗಿ ರಾಮ ಹೇಳ್ದ ಮಾತ್‌ನಾ ನೆನ್ಸಿ ॥ ಪ ॥
ಕನ್ನಡೀನ ತೆಗ್ದ್ ನೋಡಿ । ಚೆನ್ನ ಮೋರೆ ತೇಳಿ ನಗ್ತಾ ।
ತನ್ನ ಮನ್ಸ್ಲೊ ಮಾತನಾಡ್ತ । ಹೆಣ್ಣ್ ರೂಪಲಂದ್ ಬಾತ್ ॥ ೧ ॥

**॥ ಕಾಪಿ ಅಷ್ಟ ॥**

ಕಾಮ ಸಮಾನನೆ ಕೇಳ್ । ಹೇಳಿ ।
ರಾಮ ಕಳ್ಸಿಟು ನನ್ನ ನಿಲ್ಲ್ ॥

ನಾ ಮನ ಸೋತೊಳೆ ನಿಂಗೆ । ನಿನ್ನ ।
ಕಾಮಿಸಿ ಬಂದೊಳೆ ಹಿಂಗೆ । ಇನ್ನ್ ।
ಕ್ಷೇಮಲಿ ವರಿಸೆನ್ನ । ತಾಳಿಕೆ ಆದ್ಲೆಯ ।
ಪ್ರೇಮಲಿ ಕೂಡುಯ । ರಸ ಮಾತಾಡ್ಯ ॥ ೧ ॥

**॥ ಶಂಕರಾಭರಣ ಅಷ್ಟ ॥**

ಭಂಡ್ ಮಾತ । ನಾಡ್ಬಡಯನೀ ।
ಕಂಡ್ರೆ ಭಾರಿ ಚೆಲುವೆ ನಿನ್ನ ॥
ಗಂಡ ಯಾರ್ ದೇಶ ಯಾವುದು ॥
ಗಂಡ್‌ಗಲಿ ನನ್ನಣ್ಣ ಈ ಭೂ ।
ಮಂಡಲೊಡೆಯ ರಾಮದೇವನ ।
ಕಂಡದೆಲ್ಲಿ ಹೋಗು ಸುಮ್ಮನೆ ॥ ೧ ॥

**॥ಶಂಕರಾಭರಣ ಅಷ್ಟ॥**

ಮಂದಗಮನೆ ಇಂಥ ಸುಳ್ಳು ಒಂದು ಕೂಡ ಹೇಳ್ಬಡಯ ।
ಮುಂದೆ ಬ್ರಹ್ಮಚಾರಿ ನಾ ಕೇಳ್ ॥
ಬಂದ ದಾರಿಗೆ । ಸುಂಕಯಿಲ್ಲೆ ।
ತಂದರಣ್ಣನ ಗುರ್ತನಾ ನೀ ।
ಮುಂದೆ ಯೋಚನೆ ಮಾಡ್ನೆ ನೋಡಮ ॥ ೧ ॥

**॥ ಶಂಕರಾಭರಣ ಏಕ ॥**

ಏಕಪತ್ನಿನ ವ್ರತನಿಂಗೆ- । ಬ್ರಹ್ಮಚರ್ಯನೇ ।
ಬೇಕೆಂಬ ಹಠ ತಮ್ಮಂಗೆ ॥
ಬೇಕಡ ಗುರುತು ಆತಂಗೆ- । ಸಹಕರಿಸೊಕು ।
ನಾ ಕೈನಾ ಮುಗಿತೊಳೆ ನಿಂಗೆ ॥ ೧ ॥

ಸುಮ್ಮನೆ ಕುಣಿಸ್ತೊಳರಲ್ಲ । ನಗೆಯಾಟಕೆ ।
ನಿಮ್ಮ ಕೈಗೊಂಬೆಯಾದೆಲ್ಲ ॥
ನಮ್ಮ ಹಗುರ ಮಾಡ್ರೆ ಕೇಳ್ । ಬುಡ್ಕಿಲೆ ನಾವು ।
ಹಮ್ಮೆಲ್ಲ ಬುಡ್ಸುವಾ ನಿಲ್ಲ್ ॥ ೨ ॥

ಚದುರೆ ಬಾ ಬಾತೇಲಿ ಕರ್ದ್ । ಬಾಣನ ತೆಗ್ದ್ ।
ತುದಿಲಿ ಮೂಗ್‌ನ ಕೊಯಕೆ ಬರ್ದ್ ॥
ಚದುರಂಗೆ ತೋರ್ಸೊಕು ಬೆನ್ನ । ಬೇಗನೆ ಹೋಗಿ ।
ಮದುವೆಯಾಗಿಯೆ ಬುಟ್ನೆ ಅವ್ನ ॥ ೩ ॥

**॥ ಸೌರಾಷ್ಟ್ರ ತ್ರಿವುಡೆ ॥**

ಅಣ್ಣನಾಜ್ಞೆನ ನೋಡಿ ಲಕ್ಷ್ಮಣ ।
ತನ್ನೊಳಗೆ ನಕ್ಕಂಡ್ ಕಲ್ಸಿತ್ ।
ಸಣ್ಣ ಪ್ರಾಯದ ಗೂಡೆ ಬಾ ಮೋ । ಹನ್ನೆ ತೇಳಿ ॥ ೧ ॥

ಇತ್ತ ಬಾ ಬಾತೇಳಿ ಲಕ್ಷ್ಮಣ ।
ಕೆತ್ತಿ ಬುಟ್ಟತ್ ಮೂಗು ಎದೆನಾ ।
ರಕ್ತಮಾಂಸದ ಕೋಡಿ ಹರಿಯಕೆ । ಮತ್ತೆ ಕಿರ್ಚಿ ॥ ೨ ॥

**॥ ಭೈರವಿ ಏಕ ॥**

ರಾಘವ ಕೇಳಿಯ ನೀನ್ । ಬುಡ್ ।
ಈಗಲೆ ಹೋನೆಯ ನಾನ್ ॥
ಬೇಗನೆ ಕಲ್ಸಿನೆ ಬುದ್ದಿ । ನೀ ।
ಹೋಗಿಯ ಮಾಡ್ದ ದುರ್ಬುದ್ಧಿ ॥ ೧ ॥

॥ **ಸೌರಾಷ್ಟ್ರ ತ್ರಿವುಡೆ** ॥

ಅಣ್ಣಗಿದರಾ ಹೋಗಿ ಹೇಳ್ನೆಯ ।
ನಿನ್ನ ಹೆಣ್ಣ್ನ ತಂದ್ ಕಲ್ಸಿನೆ ।
ಮಣ್ಣ್ ಮುಕ್ಕೊಕು ಮಾಡ್ದ ಪಾಪಕೆ ।
ಕಣ್ಣ ಮುಂದೆ ॥ ೧ ॥

ಎತ್ತ ಹೋದರು ಬುಟ್ಟುಬುಡಿಕಿಲೆ ।
ಮತ್ತೆ ಹುಡ್ಕಿಯೆ ನಿನ್ನ ಹೆಣ್ಣ್ನ ।
ಎತ್ತಿ ತಾರದೆ ಹೋಗಿ ಬುಟ್ಟರೆ । ಮತ್ತೆ ಹೇಳ್ ॥ ೨ ॥



# ಇಂದ್ರಜಿತು ಕಾಳಗ

**॥ ಕಾಂಭೋಜಿ ಝಂಪೆ ॥**

ಕೇಳಿತ್ತ ಶ್ರೀರಾಮಚಂದ್ರ ಕಪಿಗಳ ಸಾಹ್ಸ ।
ಹೇಳುದೇನಬಬತೇಳಿ ॥
ಸಾಲದೀ ನಾಲಗೆನು ನಿಮ್ಮ ಕೊಂಡಾಡಿಕೆತ ।
ಹೇಳ್ತಾಗಲಂದ್ ಕುಸಿಲಿ ॥ ೧ ॥

ಬೆರಳಿರ್ಸಿ ಮೂಗ ಕೊಡಿಗಂದ್ ಚೋದಿಗಲಿಯವ ।
ಕರ್ತ್‌ಜಾಂಬವನ ಹತ್ರ ॥
ಬೆವ್ರಿಳ್ಸಿ ಕಾದಾಡಿ ಬೊಚ್ಚ್ಯೋಗುಟೆಲ್ಲವುಕು ।
ಸರಿ ಈಗ ಹೊತ್ತಾವುಟು ॥

**॥ ಸೌರಾಷ್ಟ್ರ ತ್ರಿವುಡೆ ॥**

ಮೂರುಲೋಕನ ತಣ್ಸೊ ಶಕ್ತಿಲಿ ।
ಬಾರಿ ಮೆರೆತಲೆ ಹತ್ತ್ ತಲೆಯವ ।
ಏರಿ ಕುದ್ದದ್ ತನ್ನ ಪೀಠಲಿ ಸಭೆನ ಕರ್ದ್ ॥ ೧ ॥

ಕಿಡಿನಕಾರ್ಕಂಡ್ ಬೊಬ್ಬಿಸಿತಲವ ।
ಬುಡ್ದುಲಿಂದಾ ರಾಮಸೈನ್ಯನ ॥
ಬಡ್ದ್ ಯಮಲೋಕ್ಕೆ ಕಳ್ಸಿನೆ । ನಡೆಮ ಈಗ ॥ ೧ ॥

ಕುರಿಗೆ ಹೆಬ್ಬಿಲಿ ಹೆದ್ರಿದೆನ ಆ ।
ಕುರೆಗ ಮೊನ್ಸರ ಆರ್ಭಟೆಗೆ ನಾ ॥
ಸರಿವ ಮಾತುಟ್ಟೊಮ್ಮೆ ಹೇಳಿತ । ಗರುವಲಂದ್ ॥ ೨ ॥

**॥ ಭಾಮಿನಿ ॥**

ಭಾರಿ ಯುದ್ಧಲಿ ನಡ್ಡಸಂಗತಿ ।
ಚಾರಕರ್ ಮೊರ್ಟಡ್ಡ ಬಿದ್ದಂಡ್ ॥
ಚೂರು ಸುಳಿಯದೆ ಹೇಳ್ದೊ ರಾಯಗೆ ।
ದಾರಿಕಾಣದೆನೆ ॥ ೧/೨ ॥

**॥ ನೀಲಾಂಬರಿ ತ್ರಿವುಡೆ ॥**

ಮಕರಾಕ್ಷ ಹೋದ ವಾರ್ತೆನ ಕೇಳಿ । ದಶ ।
ಮುಖ ಮೊನ್ಸಿಲಾಗ ಬೇಜರತಾಳಿ ॥
ನರ್ಕಕೆ ಹೋದೆತ ಬೆಂದೋತ್ । ಗೆಲ್ಲು ।
ದಕೆ ದಾರಿ ಕಾಣದೆ ನಿಲ್ಗಿತ್ ॥ ೨ ॥

ತಂಗೆನೆ ಕುಲಕೆ ಕೇಡಾತ್ । ಗೆಲ್ವ ।
ಹಂಗೆ ಕಾಣ್ತಿಲೆ ಮುಂದೆ ನಾವ್ಗೆ ಬಂಜಾತ್ ॥
ಹಿಂಗೆ ಬುಟ್ಟರೆ ಸೋಲೆ ಗತಿಯೇನ್ । ರಾ ।
ಮಂಗೆ ಸೋತೋದೆಲ ಮುಂದೇನ್ ॥ ೩ ॥

**॥ ಸೌರಾಷ್ಟ್ರ ತ್ರಿವುಡೆ ॥**

ಬಾರಿ ಸೇನೆನ ಕೂಡ್ಸಿ ಕುದುರೆನ ।
ಏರಿ ಬಂದವ ರಾಮ ಸೇನೆನ ।
ಕಾರ್ಸಿ ಬೀಳ್ಸಿತ್ ಬಾಣ ಹೊಡ್ದೇ । ವೀರ ದೈತ್ಯ ॥ ೧ ॥

ಬಿದ್ದ ಸೇನೆನ ನೋಡಿ ರಾಮನ್ ।
ಶಬ್ದವೇಧಿತ ಹೇಳ್ವ ಬಾಣನ ॥
ಹಿಡ್ದ್ ಹೊಡ್ಯಕೆ ಇಂದ್ರಜಿತು ತಾ । ನೆದ್ದ್ ಹೇಳ್ತ್ ॥ ೨ ॥

**॥ ಭೈರವಿ ಏಕ ॥**

ಎಲೆಲಾ ಮನ್ಸನೆ ಕೇಳ್ । ಕುರೆ ।
ಗಳ ಬೀಳ್ಸಿದೆ ನೀ ತಾಳ್ ॥
ತಲೆಕೆಟ್ಟೋದವ ನೀನ್ । ಬಾ ।
ಸುಲಭನ ಕಾಳಗ ಏನ್ ॥ ೧ ॥

ಮಾಯಲಿ ಗೆದ್ಯನ ಖೂಳ । ನೀ ।
ತಾಯಿ ಬಸ್ರಿಲಂನ್ಗಿದರೂ ।
ಸೂರ್ಯಕುಲದವ ನಾನ್ಯ । ಉ।
ಪಾಯಗ ನಡೆಯದ್ ಏನ್ಯ ॥೨॥
(ಯುದ್ಧ)

**॥ ಭಾಮಿನಿ ॥**

ಗೆಲ್ಲಿಕಿವನಾ ಸಾಧ್ಯ ಇಲ್ಲೆತ ।
ಕಳ್ಳರಂಗೋಡ್ಯಂಡ್ ರಥನಾ ।
ಅಲ್ಲಿರುವ ಹನುಮಂತ ನತ್ತಲೆ ಹಾರ್ಸಿತಾಕ್ಷಣವೇ ॥ ೧/೨ ॥

**॥ ಸೌರಾಷ್ಟ್ರ ತ್ರಿವುಡೆ ॥**

ಮಾಯ ವಿದ್ಯೆಲಿ ಕಪಿಗಳೆಲ್ಲರ ।
ಸಾಯ್ಸಿ ರಾಮನ ಸೋಲ್ಸಿಕಾಗ್ದೆ ಪ ।
ಲಾಯನನ ಮಾಡಿರುವ ರಕ್ಕಸ । ಬಾಯ ಮುಂದೆ ॥ ೧ ॥

ಹಿಂದೆ ನಿನ್ನನುದ್ಯಾನವನಲೀ ।
ಬಂದಿಯಾಗಿರ್ಸಿದೆಯ ಅಸ್ತ್ರಲಿ ।
ಇಂದದರ ಮರ್ತೋರ್ಗಿ ಬಂದನ । ಒಂದ್ ತಿಳೆದೆ ॥ ೨ ॥

ಹತ್ತ್ ಸಾವಿರ ಖಳರ್ ವನಲೀ ।
ಸತ್ತ್ ಹೋತ್ಲೆನ ಮುಷ್ಠಿ ಪೆಟ್ಟ್‌ಲಿ ।
ವ್ಯರ್ಥ ಬೊಗ್ಳುದು ನಿಲ್ಸ್ ನೋಡಮ । ಗರ್ತ್ತನವನೇ ॥ ೩ ॥

॥ **ಭಾಮಿನಿ** ॥

ಯುದ್ಧಲೀ ಕಪಿ ಸೋತ್ ಹೋಕಿಲೆ ।
ಯುದ್ಧ ಮಾಡ್ತೊಳ ಸೀತೆಗಾಗಿಯೆ ।
ಸದ್ದ್ ನಿಲ್ಸಿನೆತೇಳಿ ಮಾಯಾ ಸೀತೆನವ ನಿರ್ಮಿಸ್ತ
ತಲೆಕಡೆಕೆ ॥ ೧/೨ ॥

॥ **ಕೇದಾರಗೌಳ ಅಷ್ಟ** ॥

ನೋಡಪ್ಪ ಓ ಹನುಮಂತ ರಾಕ್ಷಸ ನನ್ನ ।
ಕಾಡುವ ರೀತಿ ನೋಡು ॥
ಬೇಡ್ತೋಳೆ ಬುಡ್ಸಪ್ಪ ಈ ಸಂಕಟಂದಲೆ ।
ಹೇಡಿ ಕೊಂದದೆ ನನ್ನೀಗ ॥ ೧ ॥

ಗುಣವಂತ ರಕ್ಕಸ ಕೇಳಿತ್ತ ನೀ ಪೌಲ ।
ಸ್ತ್ಯನ ಕುಲದವ ಹೌದಪ್ಪ ॥
ಘನ ಪಂಡಿತ ಶಿವಭಕ್ತನು ನೀನಯ್ಯ ।
ಕನಿಕರ ನಿಂಗಿಲ್ಲೆನ ॥ ೨ ॥

॥ **ಭೈರವಿ ಏಕ** ॥

ಮರ ಹಾರುವ ಕುರೆ ಜಾತಿ । ಬಾಯ್ ।
ಬುಟ್ರೆ ಬುಡ್ಕಿಲೆ ಕೋತಿ ॥
ಬರೆಹೆಣ್ಣ್‌ಂದೀ ವಂಶ । ಉರೆ ।
ತಿರೊದುಯ ಮಾಡಿನೆ ಧ್ವಂಸ ॥ ೧ ॥

॥ **ಕೇದಾರಗೌಳ ಅಷ್ಟ** ॥

ಜನಕ ರಾಜಗೆ ಹುಟ್ಟಿ ರಾಮನ ಹೆಣ್ಣಾಗಿ ।
ಕೊನೆಯಿಲ್ಲೆನ ಕಷ್ಟಕೆ ॥
ದಣಿದೋದೆ ಪೂರ್ವಜನ್ಮದ ಕರ್ಮ ದಿನ ಬುಡ ।
ದೆನೆ ನನ್ನ ಕೊಲ್ತುಟಯ್ಯೊ ॥ ೧ ॥

॥ **ಕಲ್ಯಾಣಿ ಅಷ್ಟ** ॥

ಅತಿಬಲವಂತ ರಾಕ್ಷಸನೆ । ಮುಂದಕೆ ಲಂಕಾ ।
ಪತಿ ಆವ ಓ ವೀರನೆ ॥
ಮತಿವಂತ ನೀನಿಂದ್ರಜಿತು ಧೀರನೆನ್ನಿ ದು ।
ರ್ನಡ್ತೆಲಿ ನಡೆಬಡ ಸೆರಿದಾರಿಯಲ್ಲಯ ॥ ೧ ॥

॥ **ಭೈರವಿ ಏಕ** ॥

ನಿಲ್ಸಿಯ ಬೊಗ್ಗೆನ ಮಂಗ । ನಾ ।
ಕೊಲ್ಲುದೆ ಸೀತೆನ ಈಗ ॥
ಕೊರಳ್‌ನ ಕೊಯ್ದನೆ ನೋಡ್ । ತಡೆ ।
ವರೊಳನ ಕರ್ಸಿರೆ ಕೇಡ್ ॥ ೨ ॥

**॥ ಕಲ್ಯಾಣಿ ಅಷ್ಟ ॥**

ಹರಬೊಮ್ಮರಾ ಮೆಚ್ಚಿಸಿ । ನೀ ಅತಿದೊಡ್ಡ ।
ವರಗಳ ಸಂಪಾದಿಸಿ ॥
ನರಕ ಕೆಲ್ಸನ ಮಾಡಿರೆ । ಬುಡ್ಕಿಲೆ ರಾಮ ।
ವೈರಿಗಳೆಲ್ಲರ ತಲೆತೆಗ್ದೇ ಬುಟ್ಟದೆ ॥ ೧ ॥

**॥ ಭಾಮಿನಿ ॥**

ನಿಲ್ಸ್ ರಗಳೆನ ಮರಕೆ ಹಾರ್ತಾ ।
ಹಲ್ಕಿರಿವ ಕಪಿ ಬಾಲಸುಟ್ಟವ ।
ಇಲ್ಲಿ ಬದ್ಕಿದ್ ಓಡಿ ಹೋದವ ನೀನೆ ತಾನೆ ॥ ೧/೨ ॥

**॥ ಭಾಮಿನಿ ಅರ್ಧ ॥**

ಹರ್ತ ಖಡ್ಗನ ಎತ್ತಿ ಝುಳ್ಪಿಸಿ ।
ಕೊರ್ಳ್ ಕುಯ್ದತ್ ಮಾಯಸೀತೆನ ।
ಕೆರಳಿ ಹನುಮನ್ ಎದ್ದ್ ನಿಂತತ್ ತಿಳಿಯದಿದರ ॥ ೧/೨ ॥

**॥ ಶಂಕರಾಭರಣ ಮಟ್ಟೆ ॥**

ಬಿದ್ದತಾಗ ಸೀತೆ ತಲೆನು ಭೂಮಿ ಮೇಲಕೆ ।
ಎದ್ದ್ ಹನುಮ ಇಂದ್ರಜಿತುಗೆ ಹೊಡ್ತ್ ಮುಷ್ಟಿಲಿ ॥ ೧ ॥

**॥ ಸಾಂಗತ್ಯ ರೂಪಕ ॥**

ಅಯ್ಯಯ್ಯೋ ಜಾನಕಿ ಹೆಣ್ಗಳ ಕುಲಮಣಿ ।
ಕಯ್ಮೀರಿ ಬಿದ್ದೋದ ನೆಲಕೆ ॥
ಕಯ್ಯಾರೆ ಕರ್ಮನ ಮಾಡ್ದೆಲೆ ನಾ ಜಗ ।
ದಯ್ಯಂಗೆ ಏನ್ಹೇಳಿ ದೇವ್ರೆ ॥ ೧ ॥

॥ **ವಾರ್ಧಿಕ** ॥

ಗಾಳಿಮಂಜನ ಸಿಂಹನಾದ ಕೇಳ್ತಿಲೆಯೀಗ ।
ಮೂಳದೈತ್ಯನ ಬಿಲ್ಲ ಠೇಂಕಾರ ಕೇಳ್ತುಟಲೆ ।
ವೇಳೆಕಳೆಯದೆ ಜಾಂಬವರ ರಾಮ ಕಳ್ಸಿ ಹನುಮನ
ನೋಡಿ ಬಾತೇಳಿ ಹೇಳ್ತ್ ॥ ೧/೨ ॥

ಯುದ್ಧಭೂಮಿಲಿ ನಡೆತ ಬಿದ್ದ ಹೆಣಗಳದಾಟಿ ।
ಮುರ್ದ ರಥಗಳ ಹತ್ತಿ ಇಳ್ದ್ ಜಾಂಬವರಾಗ ।
ಕುದ್ದ್ ಮೊರ್ಡ್ತಲಿರುವ ಹನುಮ ದೂರಲಿ ಕಂಡ್
ನಡ್ದೊ ಆ ಕಡೆಗೇ ॥ ೧ ॥

॥ **ಭಾಮಿನಿ** ॥

ಕೇಳ್ ಮರುತನ ಮೊಂಜ ಹೇಳ್ದರ ।
ಕಾಳಗಲಿ ಖಳ ಮೆರ್ದ ಸಂಗತಿ ॥
ಕೇಳಿ ಬರೊಕುತ ರಾಮ ಕಳ್ಸಿತ್ । ಹೇಳಿಕಾದೊ ॥ ೧/೨ ॥

॥ **ಸಾವೇರಿ ಅಷ್ಟ** ॥

ಮಾತ ಕೇಳೋಕು ಜಾಂಬವರೆ । ನಾ ।
ಸೋತೋದೆ ಖೂಳಂದ ದೇವ್ರೇ ॥
ಹೋತೆಲ್ಲ ಕೈಮೀರಿ ಕಾದಾಡಿ ಸೋತೆನಾ ಸೀತೆನ ಗಂಟ್ಲ್ನ
ಕೊಯ್ದಾಕಿ ಒಡ್ಸಿತ್ ॥ ೧ ॥

॥ **ಶಂಕರಾಭರಣ ತ್ರಿವುಡೆ** ॥

ಮರುತಮಂಜನೆ ತಿಳ್ದವನೆ ನೀ ।
ಮೊರ್ಲು ಹಿಡ್ದುಟ ಹೇಳ್ಯ ॥
ದುರುಳ ಮಾಡಿರೊ ಕಪಟ ತಿಳಿಯದೆ।
ಕೊರ್ಗ್ತೊಳಯ ॥೧॥

## ॥ ಸಾಂಗತ್ಯ ರೂಪಕ ॥

ಜಾನಕಿ ಜನಕರಾಜನ ಕೂಸೆ ನೋಡಿತ್ತ ।
ಕಾಣದ ಲೋಕಕೆ ಹೋದೆ ॥
ನಾ ನಿನ್ನ ಉಳ್ಸಿಕಾಗದೆ ಹೋದೆ ಹಣೆಬರ ।
ನೇನ ಹೇಳೊಕು ಅಯ್ಯೋ ದೇವ್ರೇ ॥ ೧ ॥

## ॥ ವಾರ್ಧಿಕ ॥

ದೇವ ರಾಮಗೆ ವಿಭೀಷಣ ಕಥೆನ ಹೇಳ್ತಾಗ ।
ದೇವಿ ಜಾನಕಿಯಲ್ಲ ನಮ್ಮವರ ಕಪಟ ಇದ್ ।
ದೇವ್ರದೇವರೆ ನೀವು ನರನಾಟಕನ ನಿಲ್ಸಿ ಕಪಟ ಹೆಣ್ಣಿಗೆ
ಚಿಂತೆ ಬುಡ್ನಿ ॥ ೧/೨ ॥

## ॥ ಭಾಮಿನಿ ॥

ಇತ್ತಕಪಿಗಳ್ ಸೇರಿರಿಕೆ ತಾ ।
ನತ್ತ ರಾವಣಿ ತನ್ನ ಅಯ್ಯಗೆ ।
ಶತ್ರುಗಳ ಕೊಂದನೆತ ಕೊಟ್ಟಿರೊ ಭಾಷೆ ನೆನ್ಸಿ ॥
ಮತ್ತೆ ಕುಲದೇವ್ರನ್ನೆ ನೆನ್ಸ್ತ ।
ಭಕ್ತಿಲವ ಮೃಗಮಾಂಸ ಕೊಟ್ಟತ್ ।
ಎತ್ತಿ ವಿಧವಿಧದಾರತಿಲಿ ಮನದಿಚ್ಛೆ ಹೇಳ್ತಾಗ ॥ ೧ ॥

## ॥ ಕಾಂಭೋಜಿ ಝಂಪೆ ॥

ಶಂಕರಿಯೆ ಪಾರ್ವತಿಯೆ ದಯೆತೋರ್ಸ್ ಶುಭಕರಿಯೆ ।
ಶಂಕೆಯಿಲ್ಲದೆ ದಾರಿ ತೋರ್ಸ್ ॥
ಲಂಕೆಯೊಡೆತನ ನಾವ್ಗೆ ಸಿಗೊ ಹಂಗೆ ಮಾಡಮ್ಮ ।
ಮಂಕಾದ ನಮ್ಮವ್ರ ಹರ್ಸ್ ॥ ೧ ॥

## ॥ ಸಾಂಗತ್ಯ ರೂಪಕ ॥

ಸೋಲಾತ್ ನಾವ್ಗೆತ ಇಂದ್ರಜಿತುನು ಬೇಗ ।
ಮೂಲಕುಂಭಿನಿ ಭೂಮಿಗಿಳ್ದ್ ॥
ಕಾಲನ ಹಂಗೆನೆ ಗುರು ಹೇಳ್ದ ರೀತಿಲಿ ।
ಶಾಲೆ ಹೊಕ್ಕಿಯೆ ದೀಕ್ಷೆ ಮಾಡ್ತ್ ॥ ೧ ॥

ಆ ಮಾರಣಹೋಮ ಕಿಚ್ಚಿನ ಬಿಸಿಗಾಗ ।
ಆ ಮೂರು ಲೋಕನು ನಡ್ಗಿ ॥
ಆ ಮಹಾ ಕಪಿಸೇನೆ ಶಾಖಕ್ಕೆ ಹೊರ್ಳಿಕೆ ।
ರಾಮ ವಿಭೀಷಣಂಗ್ಹೇಳ್ತ್ ॥ ೧ ॥

ಧಗಧಗ ಉರಿತಿರೊ ಕಿಚ್ಚಿನ ಬೇಂಕೆಗೆ ।
ಹೊಗೆ ತುಂಬಿ ಮುತ್ತಿಟು ನೋಡು
ಹಗೆನ ಮಾರಣ ಹೋಮಕಿಕ್ಕುವ ಬಲೆನೀಗ ।
ಮಗ ಇಂದ್ರಜಿತು ಮಾಡ್ತುಟ್ಟೀಗ ॥ ೨ ॥

ನಿಮ್ಮ ಸೇನೆಲಿ ಯಾರ್ ನಿದ್ರೆ ಹೆಣ್ಣ್ನ ಸಂಗ ।
ಅನ್ನ ಬುಟ್ಟಿರುವಂಥ ವ್ರತನ ॥
ಹನ್ನೆರ್ಡ್ ವರ್ಷ ಪಾಲಿಸಿದಂತ ವೀರರ್ ।
ಯಾರಿದ್ದರೂ ಗೆಲ್ಲಿಕಾದು ॥ ೩ ॥

## ॥ ಮಾರವಿ ಏಕ ॥

ಏಕೀತರ ಬರೆ ಚಿಂತೆನ ಮಾಡ್ಯರಿ । ಈ ಖೂಳನ ಕೊಲ್ನೆ ॥
ಸಾಕೇತದ ದೊರೆ ಕೊಡು ನನಗಪ್ಪಣೆ ।
ತಾಕತ್ತವ ನಾನೇ ॥ ೧ ॥

ಕೊಂದ್ ಕೊಟ್ನೆ ಹಗೆಕಡೆನವರೀಗಲೆ ।
ಸಂದೇಹನೆ ಬೇಡ ॥
ಮಂದರಪರ್ವತ ಹೊತ್ತಣ್ಣನ ಕರು ।
ಣೆಂದಲೆ ಕೊಂದನೆಯ ॥ ೨ ॥

ಎಲ್ರಿಂದಲು ಆಗದ ಕಾರ್ಯನ ನಾ ।
ನಿಲ್ಲಿ ಮಾಡಿತೋರ್ಸ್ನೆ ॥
ನಿಲ್ಲದೆ ನಡ್ದನೆ ದೈತ್ಯನ ಈಗಲೆ । ಕೊಲ್ಲುವ ಕೆಲ್ಸಕ್ಕೆ ॥ ೩ ॥
(ದಿತ್ತ)

**॥ ಭೈರವಿ ಝಂಪೆ ॥**

ಏಳ್ ದೈವದ್ರೋಹಿ । ಕಾಳಗಕೆ ನಿಲ್ಲ್‌ತೆಳಿ ।
ಕಾಲ್‌ಂದ ರಕ್ಕಸನ ಕ । ಪಾಳಕ್ಕೆ ತುಳ್ತ್ ॥ ೧ ॥

ದೀಕ್ಷೆನವ ಬುಟ್ಟೆದ್ದ್ । ಆ ಕ್ಷಣನೆ ರಥ ಏರ್ತ್ ॥
ಲಕ್ಷ್ಮಣಗೆ ಹೇಳ್ತ್ ನೀ । ಲೆಕ್ಕನಾ ನಂಗೆ ॥ ೨ ॥

ನನ್ನ ತೋರ್ಸಿಕೆ ಬಂದ । ಕುನ್ನಿ ರಕ್ತನ ಸುರ್ಸಿ ।
ನಿನ್ನ ಪೌರುಷ ಕಿಚ್ಚ್ ನಿಲ್ಸಿ ಬುಟ್ನೆ ॥ ೩ ॥

**॥ ಶಂಕರಾಭರಣ ಏಕ ॥**

ಹೆಣ್ಣ್ ಕದ್ದವಂಗೆ ಮಂಜ ।
ಮಣ್ಣ್ ಮುಕ್ಸಿ ಬುಟ್ನೆ ನಿನ್ನ ।
ಸುಮ್ನೆ ಕಿಚ್ಚಿ ಕಟ್ಟಿಕಂಡ । ಕುನ್ನಿ ನೀನಿಂದ್ ॥ ೧ ॥

ಭಾರಿ ಬಾಣ ಹಿಡ್ದ್ ಹೇಳ್ತ್ ।
ತೀರ್ತ್ ನಿನ್ನಾಯುಷ್ಯತೇಳಿ ।
ಹಾರ್ಸಿ ಬುಡ್ತ್ ಒಂದೆ ಕ್ಷಣಕೆ । ಕಾರಿ ಸಿಟ್ಟ್ನ ॥ ೨ ॥

ತಾತ ಕದ್ದ್ ಇಸ್ದ ಹೆಣ್ಣ್ । ಸೀತೆನೀಗ ರಾಮ ದೇವ್ರ ।
ಮಾತ್ನಂಗೆ ಒಪ್ಸಿ ಬುಡುತ। ಸೋತು ಹೇಳಿಯ ॥ ೩ ॥

ಕೇಳಿಯಾ ನಿನ್ನಣ್ಣ ಬಂದ್ । ಕಾಲಿಗೆರ್ಗಿ ಬೇಡಿ ಕಂಡ್ರು ।
ಮೇಲೆ ಬುಡುವ ಮಾತುಟ್ಟಾಯ ।
ಹೇಳ್ ನೋಡಮ ॥ ೪ ॥
(ಯುದ್ಧ)

**॥ ಕಾಂಭೋಜಿ ಝಂಪೆ ॥**

ಹರ ಹರಾ ಶಕ್ರಾರಿ ಎಂಬ ಹೆಸರ್ಂದ ಲೀ ।
ವರೆಗೆ ಮೆರ್ದೊಳೆ ಮೂರು ಜಗಲಿ ॥
ಸುರನರರ್ ಸರ್ಪಗಳ ಹೆದ್ರಿಸಿದ ಬಲ ನಾನ್ ।
ಒರ್ಗಿಸಿತ್ ನೆಲಕೀಗ ನನ್ನ ॥ ೧ ॥

ಬಂದೊಳದ್ ನರರಲ್ಲ ಬಂದ ಕೋತಿಗಳೆಲ್ಲ ।
ಕುಂದಿರದ ಬಲದವುತ ತಿಳ್ದೆ ॥
ತಾತ ಕಳ್ಳರ ಹಂಗೆ ತಂದೆ ಪರಹೆಣ್ಣಾಕೆ ।
ಸೀತೆ ಮೊನ್ಸಳೆ ಅಲ್ಲ ಸತ್ಯ ॥ ೨ ॥

ಹನ್ನೆರಡ್ ವರ್ಷ ನಿದ್ರಾಹಾರ ಹೆಣ್ಸಂಗ ।
ಅನ್ನ ಬುಟ್ಟಿರುವ ವ್ರತ ನೀನ್ ॥
ಮುನ್ನ ಮಾಡಿದ್ದರೆನೆ ಕಾದಾಡ್ ಇಲ್ಲದರೆ ।
ನನ್ನ ಪೌರುಷ ನಿಂಗೆ ತೋರ್ಸ್ವೆ ॥ ೩ ॥
(ವಿಭೀಷಣ ಬಾಣ ಬಿಡಲು ಹೇಳುವುದು)

**॥ ಸೌರಾಷ್ಟ್ರ ತ್ರಿವುಡೆ ॥**

ಹೂಡ್ ನೀ ಬ್ರಹ್ಮಾಸ್ತ್ರ ಈಗಲೆ ।
ದೂಡ್ ಬುಡ್ಬಡ ಸಮಯ ಸುಮ್ಮಗೆ ।
ಆಡಿಕಿದ್ ರಣರಂಗ ನೆಂಪಿಸ್ । ಮೋಡಿಬೇಡ ॥ ೧ ॥

ಕೆಟ್ಟ ಮೊನ್ನಿನ ರಕ್ಕಸನೆ ನಿ ।
ನ್ನಟ್ಟಹಾಸನ ನಿಲ್ಸಿನೀಗಲೆ ॥
ಬುಟ್ಟೆ ವಿಧಿಶರ ವೇಳೆ ಕಳೆಯದೆ । ದುಷ್ಟ ನಿಂಗೆ ॥ ೨ ॥

**॥ ಭೈರವಿ ಝಂಪೆ ॥**

ಕಿತ್ತ್ ಗಾಯದ ಕಣೆನ । ನೆತ್ತರ್ನ ತೊಳ್ದವ್ನು ॥
ಮತ್ತೆ ಕವಳೌಷಧಿನ । ಮಂತ್ರಿಸ್ತ ಹಚ್ಚಿ ॥ ೧ ॥

ಕಂದ ನೀನಾಹಾರ ತಿನ್ನದೆನೆ ಉಪವಾಸ ।
ಇಂದೊರೆಗೆ ಹೆಂಗಿದ್ದ । ಒಂದುಳೆದೆ ಹೇಳ್ ॥ ೨ ॥

ಇಂದೊರೆಗೆ ನಾ ನೀವ್ಗೆ ಫಲಗಳ್ನೆ ದಿನದಿನನು ॥
ತಂದಿತ್ತೆ ನಾ ತಿಂತ್ಲೆ । ಇಂದಿದರ ಹೇಳ್ದೆ ॥ ೩ ॥

ದೇಸಾಂತರಾ ತಿರ್ಗಿ । ದಾ ಶ್ರಮದ ಪರಿಹಾರ ।
ವಾಸಿಮಾಡಿದ ಹೆಂಗೆ । ಭಾರಿ ಕಾಡೊಳಗೆ ॥ ೪ ॥
ಹಾಸಿ ಮಲ್‌ಗಿತ್‌ಲೆ ನಾ । ಹೇಸದೆನೆ ಬಿಲ್ ಹಿಡ್ದೆ ।
ದಾಸರಂಗೆನೆ ಇದ್ದೆ । ದೂಷಕರ ಭಯಕೆ ॥ ೫ ॥



# ವಾಲಿವಧೆ

**॥ ಘಂಟಾರವ ಝಂಪೆ ॥**

ಕೇಳ್ ಶ್ರೀರಾಮ ನೀನೊಳ್ಳ ಸಂಗತಿನ । ಹೇಳ್ದೆಲ್ಲ
ಸಂಶಯನ ನಡ್ಸಿಯನ ಪೂರ ॥ ಪ ॥
ದುಂದುಭೀತೇಳ್ವ ರಕ್ಕಸನೆಲ್ಬು ಮೂಟೆನವ ।
ಒಂದೆ ಗಳಿಗೆಲೆ ರಟ್ಟೆಲೆತ್ತಿ ತೋರ್ಸಿಟ್ಯು ।
ಇಂದೆತ್ತಿ ನೀಸಾಹ್ಸ ಮೆರ್ಸಿ ತೋರ್ಸಿರೆ ನಿನ್ನ ।
ಹಿಂದೆಮುಂದೇ ನೋಡ್ದೆ ಒಪ್ಪಿಕಣೆ ಕೇಳ್ ॥ ೧ ॥

ಕಾಲ್ನ ಕೊಡಿ । ಲಾಗ ಮೂ । ರೇಳ್ ಮಾರ್ಪಿಗೆ ದೂಡ್ತ್ ।
ಏಳ್ ತಾಳೆನ ಮರಂಗ । ಮಾಲಿಕಂಡ್ ಬಿತ್ತ್ ॥
ಶ್ರೀಲೋಲ ಕಾಯೊಕುತ । ಕೇಳ್ಕಣಿಕೆ ಸುಗ್ರೀವ ।
ವಾಲಿನೀಗಳೆ ಕರಿತ । ಹೇಳ್ತಾಗ ರಾಮ ॥ ೨ ॥

**॥ ವಾರ್ಧಿಕ ॥**

ಮೂಗ್ ಕೊಡಿಲಿನೆ ಬೆರ್ಳ್‌ನಿಸ್ಸಿ ಸಾಹ್ಸನ ನೋಡಿ ।
ಆಗೊಪ್ಪಿ ಸುಗ್ರೀವ ಇವನೆ ಸರಿಜನತೇಳಿ ।
ಬೇಗ ತನ್ನವರ ಕರ್‌ಕಂಡ್ ಹೊರ್ಟತವ ಸಮಯನ
ಕಳೆದೆ ವಾಲಿ ಹತ್ರ ॥ ೧/೨ ॥

**॥ ಭೈರವಿ ಝಂಪೆ ॥**

ಜಗ್ಗಗಂಟನ ಕರೆಕೆ । ಹಗೆನ ಹೊಗೆ ಕಿಚ್ಚೆದ್ದ್ ।
ನೆಗ್ ದೊಮ್ಮೆ ಹಾರಿತ । ಮ್ಮಗೆ ಹೇಳ್ತ್ ವಾಲಿ ॥ ೧ ॥

**॥ ನಾದನಾಮಕ್ರಿಯೆ ಮಟ್ಟೆ ॥**

ಸೂರ್ಯಮೊಂಜ ಅಬಬ ತಮ್ಮ ಬಂದ್ ಬುಟ್ಟನಾ ॥
ಬಾರಿಕೊಬ್ಬು ನಿಂಗೆ ಬಾತ ಎಲೆಲ ನೋಡನೊ ॥ ೧ ॥

ನನ್ನ ಹೆಣ್ಣ್‌ನ ಕೊಟ್ಟುಬುಡಿಕೆ ಮೊನ್ಸೆ ಬಾರದೆ ।
ಅಣ್ಣ ಕೆಟ್ಟ್ ಹೋದ್ಯ ನೋಡ್ ।
ಯಾಂವ ಮೊಲ್ಲಾಯ ॥ ೨ ॥

ಸೋತು ಹೋನೆತೇಳಿ ಇಂದ್ ನಾನ್ ಬಾತ್ಲೆಯ ।
ಮೂತಿ ಗುದ್ದಿ ಜಜ್ಜಿ ಬುಟ್ನೆ ತೋರ್ಸ್ ಸಾಹ್ಸಯ ॥ ೩ ॥

ಬೀಳಿಕಾಗ ತಮ್ಮನೆದೆಗೆ ಕಾಲ್ಲಿ ಮೆಟ್ಟಿತ್ ।
ಮೂಳ ಹೋಗ್ ಸಾಯಿತೇಳಿ ಮನೆಗೆ ನಡ್ದತ್ ॥ ೪ ॥

ಹೋತ ಅಣ್ಣತೇಳಿ ಮೆಲ್ಲ ಎದ್ದ್ ನಿಂತತ್ ।
ಸೋತ್ ಸಿಟ್ಟ್‌ಲಾಗ ರಾಮದೇವ್ರ ಹಂಗ್ಸಿತ್ ॥ ೫ ॥

**॥ ಸೌರಾಷ್ಟ್ರ ರೂಪಕ ॥**

ವಿಶ್ವದೊಡಿಯನೆ ನಿನ್ನ ಮಾತ್‌ನ– ।
ವಿಸ್ವಾಸ ತೇಳಿ– ನಂಬಿಬುಟ್ಟೆಲೆ– ॥ ಪ ॥

ನನ್ನ ಹಗೆಯವ್ನ– । ಮುಂದೆ ನಿಲ್ಲ್ಸಿ– ।
ಕಣ್ಣ್ಲಿ ಕಂಡೆ – । ಬಾರಿ ಲಾಯ್ಕಲಿ– ॥
ಇನ್ನ್ ಸಾಕ್‌ಯ – । ನಿನ್ನ ಒಳ್ಳದ್ – ।
ಮಣ್ಣ್ ಮಾಡ್ಸಿದ ನನ್ನ ಮೊರ್ಯಾದಿ– ॥ ೧ ॥

ಧೈರ್ಯಲಿರೊಕುಯ । ಸೂರ್ಯ ಮೊಂಜನೀ ।
ಕಾರ್ಯ ನಡ್ಸಿಕೆ ಮೋಸ ಆತಿಯ– ॥
ವಾಲಿನಾ ನಿನ್ನ– । ನೋಡಿಕಿಬ್ಬರ– ।
ಆಳು ಭೇದನೇ– । ತಿಳೇದಾತಿಯ– ॥ ೨ ॥

॥ **ಭೈರವಿ ಝಂಪೆ** ॥

ಬಾರಿ ಆರ್ಬಟೆಲಾಗ ವಾಲಿಕಿಚ್ಚಿನ ಹಂಗೆ ।
ಹಾರಿನೆಗ್ದೇಳ್ತಾಗ ಮಾರಿಯಿವನಿಂದ್ ॥ ೧ ॥

ಮತ್ತೆ ಮತ್ತೊಟ್ಟಂಗೆ । ನಿತ್ತ್ ಕಂಡೀ ಕಣಲಿ ।
ಉತ್ತರನ ಕೊಡ್ತೊಳಯ ಹೇಡಿ ಸುಗ್ರೀವ ॥ ೨ ॥

ರಕ್ತಮದಲಿಂದ್ ನೀ । ಸೊಕ್ಕಿ ನನ್ನಾ ಹೆಣ್ಣ್ನ ।
ಅಕ್ರಮಲಿ ಇಸಿಕಣಲ ಕೊಡದೆ ನೀ ನಂಗೆ ॥ ೨ ॥

॥ **ಮಾರವಿ ಮಟ್ಟೆ** ॥

ಅಂತ್ಯಕಾಲ ಇವಂಗೆ ಅಂಟಿ ।
ಕಂತ್‌ತೇಳಿ ರಾಮ ಬಾಣ ।
ಕಂತಿಸಿಯೇ ಬುಟ್ಟತಾಗ ಅಣ್‌ಂಗಿ ವಾಲಿಗೆ ॥ ೧ ॥

## ॥ ಪಂಚಾಗತಿ ಮಟ್ಟೆ ॥

ಭಾರಿಶಕ್ತಿ ಹೊತ್ತ ಬಾಣ ।
ರಾಮ ವಾಲಿಗಾಗ ಬುಡಿಕೆ ।
ಜಾರಿಹೋತ್ ಬಲಗಳೆಲ್ಲ ದಾರಿಕಾಣದೆ ॥
ಸೂರ್ಯಮೊಂಜ ಚೂಪು ಬಾಣ ।
ಊರ್‌ದ ಜಾಗೆ ಕೈಲಿಹಿಡ್ಡ್ ॥
ರಾಮದೇವ್ರೆ ಒಳ್ಳೆ ಕೆಲ್ಸ ನೀವು ಮಾಡ್ದರಿ ॥ ೧ ॥

## ॥ ಕುರುಂಜಿ ಅಷ್ಟ ॥

ಜಾಣ ಹೌದೌದುಯಾ । ಕಾ ।
ಳಗಲಿ ನೀ । ತ್ರಾಣ । ತೋರ್ಸಿದಯ ॥
ಕಾಣ್‌ವ ಲೋಕಲಿ । ನೀನೆಗಟ್ಟಿಗ ಸರಿ । ಜಾಣ ॥ ಪಲ್ಲವಿ ॥

ಸೂರ್ಯವಂಶದ ರಾಜರೊಳಗೆ ।– ಹಿಂದೆ ।
ಯಾರ್ ಹುಟ್ಯೊಳ ನಿನ್ನ ಕೆಳಗೆ ॥
ಬಾರಿ ಮೋಸದ ವಿದ್ಯೆ । ಯಾರಿಂದ ಕಲ್ತೆಷ್ಟ್ ।
ಯಾರ್ನೆಲ್ಲ ಮುಗ್ಸಿಯಳಯ । –ಕೆ ।
ಟ್ಟವರೊಳ ಮೋರೆನ ತೋರ್ಸಿದಯ ।– ನಿ ।
ನ್ನಂಥೊಬ್ಬ । ಜನ ಇರ್ದೊ ಸಾಕ್ಷಿಗಿನ್–। – ರಾ ।
ಘವ ನೀನ್ ॥೧॥

ಹೇಸಿಗೆ ಜನ್ಮಾತ್ ನಿಂದ್ । –ನೀನ್ । ಮೋಸಲಿ
ಬೀಳ್ಸಿದ ಇಂದ್ । ಬೀಸಿದ ಬಲೆಗೆ ಸಿಕ್ಕಿಸಿ ಇದ
ರ್‌ಂದೇನ್ । ಮಾಸದೆ ಉಳಿವಂತ । ದ್_ಹೆ । ಸ್ರಾತಯ ।
ಆಸೆ ನಂಜಿಗ ಮುಗ್ತ । ಯ–ಮ । ತ್ಸರತೇಳ್ದು ।
ವಾಸಿಯಾಗದ ರೋಗ । ಯ–ರಾ । ಘವನೀನ್ ॥ ೨ ॥

**॥ ಮಧ್ಯಮಾವತಿ ಏಕ ॥**

ಕುರೆಗಳ ಮೂಪನೀ ಕೇಳೊಕು ಮಾತ್ ।
ಧರ್ಮನ ತಿಳಿಯದೆ ಬೊಯ್ಯೊಕೆ ಬೊತ್ತ್ ॥
ಮೆರಿವ ರಕ್ಕಸರೆಲ್‌ರ ತಲೆನ ಚೆಂಡಾಡಿ ।
ಧರ್ಮನ ಉಳ್ಸಿಕೆ ಬಂದೊಳೆ ಓಡಿ ॥ ೧ ॥

ನ್ಯಾಯನ ತಮ್ಮನ ಹೆಣ್ಣ್‌ಸಿಕಂಬೊದು ।
ದೋಸದ ಕೆಲ್ಸಯ ನೀ ಕೇಳಿ ಕಂಬೊದು ॥
ಹೇಯ ಕಾರ್ಯಕೆ ತಲೆ ಕಡಿಯೊದೆ ಮಾರ್ಗ ।
ನೀ ಯೋಚ್ಸ್ ಅರೆಕ್ಷಣ ನಿನ್ನ ದುರ್ಮಾರ್ಗ ॥ ೨ ॥

ಮುಂದೆ ಬೊದ್ಕುವ ಆಸೆ ಉಟ್ಟಾ ನೀ ಹೇಳ್ ।
ಹಿಂದೆ ತಕ್ಕಣೆ ಬುಟ್ಟ ಬಾಣನ ಕೇಳ್ ॥
ಒಂದೆ ಬುದ್ದಿಲಿ ಸತ್ಯ ಬುಡದೆ ನೀ ಇರೊಕು ।
ಚಂದಲಿ ಸೇರ್ಕಂಡ್ ಎಲ್ಲ ಬೊದ್ಕೋಕು ॥ ೩ ॥

**॥ ಭೈರವಿ ಝಂಪೆ ॥**

ಶ್ರೀರಾಮ ಕರ್‌ಣೆಯೆ ದಾರಿತೋರ್ಸೊಕು ನಂಗೆ ।
ಭಾರಿ ಪಾಪನ ಮಾಡ್ದೆ ಇಂದ್ ॥ ೧ ॥
ಮೂರ್ ದಿನದೀ ಬಾಳ್ ನೀರ ಮೇಲಿರೊ ಗುಳ್ಳೆ ।
ಯಾರ್ಗೆ ಶಾಶ್ವತ ಹೇಳ್ ಬೊದ್ಕ್ ॥ ೨ ॥

**॥ ವಾರ್ಧಿಕ ॥**

ರಾಮ ನೀ ಬುಟ್ಟಿರುವ ಬಾಣ ನಾಟಿದ ಮೇಲೆ ।
ಭೂಮಿ ಮೇಲಿನ್ನ್ ಬೊದ್ಕುವ ಆಸೆ ಉಳೆದೋ ॥
ನೀ ಮೊನ್ಸ್ ಮಾಡಿಕೊಡು ನನ್ನ ಬೊದ್ಕ್‌ಗೆ ಯಿಂದ್
ಮೋಕ್ಷತೇಳುವ ಮುಕ್ತಿನಾ ॥ ೧/೨ ॥



# ಕೃಷ್ಣಲೀಲೆ–ಕಂಸವಧೆ

**॥ ಸಾವೇರಿ ಮಟ್ಟೆ ॥**

ಎಲ್ಲಿ ಒಳಯ ಗೋಪ ಮಂಜ । ಮೆಲ್ಲ ಓಡಿ ಬಾ ॥
ಎಲ್ಲ ಜನ್ರ ಮನಸ್ ಕದ್ದ । ಕಳ್ಳ ಕೃಷ್ಣ ಬಾ ನಮ್ಮ ।
ಕಳ್ಳ ಕೃಷ್ಣ ಬಾ ॥ ೧ ॥

ಸತ್ಯವಂತೆ ದೇವಕವ್ವ । ಹೊತ್ತ ಬೊಸ್ರ್‌ಲಿ ॥
ಕತ್ತಲೆಲ್ಲ ದೂರ ಮಾಡ್ವ । ನೀನ್ ಹುಟ್ಟಿಯ । ಕೇಳ್ ।
ನೀನ್ ಹುಟ್ಟಿಯ ॥ ೨ ॥

**॥ ಪಂತುವರಾಳಿ ರೂಪಕ ॥**

ಬಾರ್‍ರ ಕೃಷ್ಣ ಕೊಳಲ್ ಊರ್ಗಮೊ । ಎಲ್ಲಿ ಒಳಯ ।
ಸೇರಿ ನಾವು ಆಟ ಆಡಮೊ ॥
ದಾರಿ ನೋಡ್ತ ಒಳಯ ಮಕ್ಕ ।
ಪೋರ ಚಿಣ್ಣಿ ಕೋಲ್ ಆಡಿ ।
ಬಾರಿ ಕುಸಿಲಿ ರೊಟ್ಟಿ ತಿಂದ್ ।
ಕೇರಿ ಕೇರಿ ಸುತ್ತಿ ಕೊಣೆಕು ॥ ೧ ॥

**॥ ಮಾರವಿ ಏಕ ॥**

ಆ ಗಿರಿ ಸಂದ್‌ಲಿ ದನಗಳ ಮೇಸಿಕೆ ।
ಹೋಗಿರೊ ವಿಜಯನೆ ಬಾ ॥
ಈಗಳೆ ಕೊಳ್‌ರ್ಂದ ರಾಗನ ಹೊರ್ಡಿಸಿ ।
ಲಾಗನ ಹಾಕಮ ಬಾ ॥ ೧ ॥

**॥ ಮಾರವಿ ಏಕ ॥**

ಧೇನುಕ ಶಕಟರ್ ಮಾತ್‌ನ ನಡ್ಸಿಕೆ । ಹೋನೆತ ದರ್ಬರ್ಲಿ ॥
ಕಾಣ್ಸುವೊ ನರ್ಕನ ಹರಿಬಲರಿಗೆ ತಲೆ ತ್ರಾಣಲಿ ಹೇಳ್ಕಂಡ್
॥ ೧ ॥

ನಂದನ ಮನೆಲಿಯೆ ಕೊಬ್ಬಿದ ಕೂಸುಗೆ ।
ಇಂದೇ ಗತಿ ಕಾಣ್ಸಿ ॥
ಬಂದಿರೊ ಕಷ್ಟಕೆ ಕೊನೆಯಿದ್ ತೇಳ್ಕಂಡ್ ।
ಮಂದ ಬುದ್ಧಿನ ಕಂತ್ರಿ ॥ ೨ ॥

ದನಗಳ ಮೇಸಿಕೆ ಮಕ್ಕಳ್ ಬಾವೊಯ ।
ದಿನದಂಗೆನೆ ಇಂದ್ ॥
ಹೆಣ ಮಾಡೊಕು ನಾವ್ ಸೊಕ್ಕಿದವರ ಕರು ।
ಣೆನ ತೋರ್ಸದೆನೆ ॥ ೩ ॥

ಮಾಯೆಲಿ ನಮ್ಮಾ ಪೂತನಿ ತೇಳುವ ।
ಮಾಯದ ರಕ್ಕಸಿನ ॥
ಸಾಯ್ಸಿದ ಕಳ್ಳನ ಮೋಸಲಿ ಕೊಲ್ಲಮೊ ।
ಕಾಯೊದು ಸರಿಯಲ್ಲ ॥ ೪ ॥

ಎತ್ತ್‌ನ ರೂಪನ ತಾಳ್ತಾಗಲೆಯವ । ಕುತ್ತುವೆತೇಳ್ಕಂಡೆ ॥
ಹೊತ್ತುನ ಕಳೆಯದೆ ಹೊರ್ಟತ್ ಧೇನುಕ ।
ಗತ್ತ್‌ನ ತೋರ್ಸ್ ಕಂಡ್ ॥ ೫ ॥

ಗಾಡಿನ ಹಾಂಗೆನೆ ಹೊರ್ಟತ್ ಶಕಟಾ ।
ಆಡ್ತಲೆ ಹೊರ್ಳಾಡ್ತಾ ॥
ದೂಡಿಕೆ ಬಾಕನ ಕೊಲ್ಲುವೆ ನಾ ಕಾ ।
ದಾಡಿತ ಹೇಳ್ಕಣ್ತ್ ॥ ೬ ॥

ಸುಳಿಗಾಳಿನ ತರ ಸುಳ್ಕಂಡ್ ವಾತಾ ।
ಬಲೆ ಬೀಸಿತ್ ಹಿಡೆಕೆ ॥
ಸುಳಿಲಿಯೆ ಸಿಕ್ಕಿಸಿ ಕೊಲ್ಲುವೆ ತೇಲ್ಕಂಡ್ ।
ಖಳ ಹೊರ್ಟತ್ ಅಂದ್ ॥ ೭ ॥

**॥ ಭೈರವಿ ಏಕ ॥**

ಬಾರೀ ಮೆರಿತೊಳ ಹೈದ । ನೀ ।
ಪೋರನೆ ಸಂಶಯ ಇಲ್ಲೆ ॥
ತೋರ್ ಸಿನೆ ಗತಿ ನಿಂಗೊಂದು । ನಾ ।
ಕಾರ್‌ಸಿನೆ ಕೊಬ್ಬುನ ಮುಂದೆ ॥ ೧ ॥

ಮರ್‌ಸಿಯೆ ನಿಜನಾ ಬಂದ್ । ಗೋ ।
ಪರ ಓಡ್ಸಿಯೆ ಇಂದ್ ॥
ಮೆರಿತೊಳ ತಲೆಲಿ ತುಂಬಿ । ನಾ ।
ಗರ್‌ವನ ಇಳ್ಸಿನೆ ನೋಡ್ ॥ ೨ ॥

ದನಗಳ ಕಾದಂಗಲ್ಲ । ಹೊ ।
ಡ್ಕಣುದು ಸುಲಭನು ಅಲ್ಲ ॥
ಮನೆ ಕಡೆ ನಡಿಯಾ ಹೈದ । ಕೋ ।
ಪನ ತಲೆಗೇರ್ಸ್ಗ ಬಡಯ ॥ ೩ ॥

**॥ ಶಂಕರಾಭರಣ ಮಟ್ಟೆ ॥**

ನೀನೆ ನಂದ ಗೋಪ ಮಂಜ । ನೇನ್ ಹೇಳಿಯಾ ॥
ನಾನ್ ಕಳ್ಸಿದವರ ಕೊಂದದೇಕೆ ಹೇಳಿಯಾ ॥ ೧ ॥

ಮೊರ್‌ಲರಂಗೆ ಕಾದಿ ನಿನ್ನ । ವರ್‌ತ ಹೇಳ್ದವು ॥
ಹೊರಟ್ ಹೋದೊ ಯಮನ ಕಡೆಗೆ ।
ಬರಿದೆ ಲೋಕಂದ ॥ ೨ ॥

ಬಂದ ಹೆಂಗ್ಸ್ ಪೂತನಿನ ನೀ । ಕೊಂದ ದರ್ಪನ ॥
ಮುಂದೆ ತೋರ್ಸಿ ಮಣ್ಣ್ ಮುಕ್ಯ ।
ಇಂದೆ ನೀನ್ ಯ ॥ ೩ ॥

**॥ ಪಂತುವರಾಳಿ ಮಟ್ಟೆ ॥**

ಎಲ್ಲಿ ಹೋದ್ಯ ಗೋಪ ಮಂಜ ।
ನಿಲ್ಲ್ ನಮ್ಮ ಜನ್ರ ಕೊಂದ ॥
ಎಲ್ಲ ದರ್ಪ ನನ್ನ ಮುಂದೆ ನಿಲ್ಸ್ ಒಮ್ಮೆಯ ॥ ೧ ॥

ಕೊಂದ್ ಬುಡುವ ಕಾಯ್ವ ಕೆಲ್ಸ ।
ಎಲ್ಲ ದೇವ್ರು ಬುಟ್ಟು ಲೋಕ ।
ಲೆಲ್ಲ ಹಗೆನ ಕಟ್ಟಿಕಂದು । ಒಳ್ಳೆದಲ್ಲಯ ॥ ೨ ॥

ಶತ್ರು ನೀನ್ ನಮ್ಮ ರಾಜ । ಮಿತ್ರ ಆಕೆ ಹೆಂಗೆ ಸಾಧ್ಯ ।
ಕತ್ತರಿಸಿಯೆ ಬುಟ್ನೆ ನೋಡು । ಕುತ್ತಿ ನಾಳಿನ ॥ ೩ ॥

ತನ್ನ ಮನಸ್ ಗೆಲ್ಲಿಕಾಗ್ದ । ಸಣ್ಣ ಜನಯ ನಿನ್ನ ಅರಸ ॥
ನನ್ನ ಜೈಸಿಕಾದೊ ಹೇಳ್ । ಮುನ್ನ ಯೋಚಿಸಿ ॥ ೪ ॥

ಬೊಗಳುದೆಲ್ಲ ನಿಲ್ಸಿ ಹೋಗು । ನೆಗೆನೆ ಬಂದದೆ ನೋಡಿ ।
ಹಗೆನ ಕಟ್ಟಿ ಕಂಡ್ ಬಾಳ್ । ತೆಗೆದ್ ಕಂಬಡ ॥ ೫ ॥

ಸುಲಬಂತೇಳಿ ನೀನ್ ನೆನ್ಸಿ । ತಿಳ್ಕಂಬಕೆನ ಹೇಳ್ದ ಮಾತ್ ।
ತುಳ್ದ್ ಬುಟ್ಟ ಬಂದ್ಯಂತಾದ್ರೆ । ತಲೆನ ಕಡ್ದನೆ ॥ ೬ ॥

**॥ ಸಾರಂಗ ಅಷ್ಟ ॥**

ಮೊಸ್ರ್ ತಕ್ಕಣಿ ಬನ್ನಿವ್ವ । ಹೆಣ್ಮಕ್ಕಳೇ ।
ಮೊಸ್ರ್ ತಕ್ಕಣಿ ಬನ್ನಿವ್ವ ॥
ಹಸ್‌ಗಳ ಕರ್ ಬುಟ್ಟು । ಕಾಸಿದ ಹಾಲಿಗೆ ।
ಒಸಿ ಹೆಪ್ಪು ಸೇರ್ಸಿಯೆ ।
ಇಸ್ಸಿ ಮಾಡ್‌ದ ಮೊಸ್ರ್ ॥ ೧ ॥

**॥ ಸಾವೇರಿ ಅಷ್ಟ ॥**

ನಂದನ ಮನೆಬಾಗ್ । ಲ್‌ಂದೋಡಮಯ ನನ್ನ ।
ಹಿಂದೋಡಿ ಚೆಣ್ಣತೇಳಿ । ಆಡಿಕೆ ಬಾವ ॥
ಚಂದದ ಹೆಣ್ಮಕ್ಕ । ಳಂದಿರ ನಿಲ್ಸಿಯೆ ।
ಇಂದ್ ಸುಂಕನ ಕೇಳಮ । ಬನ್ನಿಯ ಪೋಯಿ ॥ ೧ ॥

**॥ ಕಾಪಿ ಅಷ್ಟ ॥**

ಸುಂಕದ ನಿಜ ಯೇನ್ ತೇಳ್ । ನಿನ್ನ ।
ಅಂಕೆಗೆ ಹೆದ್ರ್‌ವ ಜಾತಿಗಳಲ್ಲ ॥
ಬಿಂಕನ ಬೀದಿಲಿ ತೋರ್ಸಿ । ಕಣ್ಣ್ ।
ಸೋಂಕಿರೆ ಬೊಚ್ಚುದು ನಿನ್ನದೇ ಮೈಕೈ ॥ ೧ ॥

**॥ ಕಾಪಿ ಅಷ್ಟ ॥**

ನಂದಗೋಪನ ಮಂಜ ಏನ್ನ । ಸಣ್ಣ ।
ಕಂದ ನಿಂಗ್ಯಾಕೆಯ ದೊಡ್ಡವ್ರ ವಿಷಯ ॥
ಮುಂದೆ ತಡ್ದರೆ ನಾವು ಇದರ । ಹೋಗಿ ।
ಮುಂದೆ ಹೇಳುವೆ ಅಪ್ಪ ಅವ್ವಂಗೆ ವಿವರ ॥ ೧ ॥

**॥ ಭಾಮಿನಿ ॥**

ಅರ್ಸು ಮಕ್ಕಳೆ ದಾರಿ ತಪ್ಪಿರೆ ।
ಪರಿಹರಿಸುವವು ಯಾರ್ ತೇಳ್ಕಂಡ್ ॥
ಸರಿಯಿದಕೆ ಮೊದ್ದರೆಕುತೇಳಿ ಯಶೋದೆ ಹಕ್ಕಲೆ ಬಂದೊ
ಸೇಕರ್ಂಡ್ ॥ ೧/೨ ॥

**॥ ಸಾರಂಗ ಅಷ್ಟ ॥**

ಬಂದಳ್ದ್ ಯಾಕೆತೇಳೆ । ಹೆಣ್ಮಕ್ಕಳೇ ।
ಬಂದೊಳ್ದ್ ಯಾಕೆತೇಳಿ ॥
ಚಂದದ ಮುಖಬಾಡಿ । ಕಂದಿ ಹೋಗುಟು ಇಂದ್ ।
ಒಂದುಳಿಯದೆ ಹೇಳಿ । ಬಂದಿರುವಾ ಕಷ್ಟ ॥ ೧ ॥

॥ **ಪಂತುವರಾಳಿ ಮಟ್ಟೆ** ॥

ಕೇಳ್ ಗೋಪಿ ರಂಗನಾಟ । ನ–ನಿ । ನ್ನಲ್ಲಿ ನಾವು ।
ಹೇಳಿಕೊಂದು ಕಾರ್ಯ ಇಲ್ಲೆ ।
ಹೇಳದಿದ್ರೆ ಸರಿನು ಕಾಣ್ಣೆ ॥ ಪ ॥

ಸರೀ ಮದ್ಯರಾತ್ರಿ ಬಾಗ್ ।
ಲ್ಮುರ್ದ್ಕ್ ಹೆದ್ರಿ ನಾವ್ ನೋಡ್ಕೆ ।
ಸೆರೆಲಿ ನುಗ್ಗಿ ಒಳಗೆ ಬಂದ್ ।
ಮೊಸ್ರ್ ಹಾಲ್ ತಿಂದ್ ಸೂಸಿ ।
ಹರ್ಂಡಿ ಕದರ ನೋಡಿ ಸುಮ್ಮ । ನೆ–ನಾ । ವಿಂಕೆಸ ।
ಕ್ಕರೆನಕದ್ದ್ ತಿಂದ್ ಒಮ್ಮೆ । ನೆ– । ನಗ್ತ ನ ।
ಮ್ಮೆಲ್ರ ಮಂಗ ಮಾಡಿ ॥ ೧ ॥

॥ **ಪುನ್ನಾಗವರಾಳಿ ಮಟ್ಟೆ** ॥

ಲಾಯ್ಕ ಆತ್ । ಯ–ಮಂಜ ।
ಲಾಯ್ಕ ಆತ್ । ಯ– ।
ಅಯ್ಯೊ ನಂದ ಗೋಪ ಕಂದ ಕದ್ದ್ ।
ತಿಂನ್ದೆಂತೇಳ್ವ ಬೇನೆ ಮಾತ್ ॥ ಪ ॥

ಬೇರೆ ಮನೆನ ಹಾಲ್ ಮೊಸ್ರ್ ।
ಕರಿಯದೋಡಿ ತಿಂಬ ಬುದ್ಧಿ ।
ಸರಿಯ ಹೇಳ್ ನಿಂಗೆ ತಿಂಬ । ಕೆ–ಇ ।
ಲ್ಲೇನ್ ಮುಗ್ತ ॥ ೧ ॥

**॥ ಸಾವೇರಿ ಅಷ್ಟ ॥**

ಗೊಲ್ಲ ಹೆಣ್ಮಕ್ಕಳ್ ಸೇರೊಳೊ ಕೋಪಲಿ ।
ಸಲ್ಲದ ಮಾತ್ ಹೇಳಿ । ಸಿಕ್ಕಾಕ್ಕೊಸ್ತ್ ಳ ॥
ಸುಳ್ಳುನ ನಂಬಾಡ ।
ಒಳ್ಳೆ ಹೃದಯ ನನ್ನ ಕೊಲ್ಲಿಕೆ ಹೆಣ್ಗ್ ತೊಳ ।
ನೀ ಕೇಳೊಕು ॥ ೧ ॥

**॥ ಮಧುಮಾಧವಿ ತ್ರಿವುಡೆ ॥**

ಲೋಕದೆಲ್ಲಾ ಜೀವರಾಸಿನ ।
ಸಾಕಿ ಕಾಯುವ ಹಕ್ಕಿ ವಾಹನ ।
ಹಾಕ್ತ್ ಪ್ರೀತಿನ ಕೈನ ಮಾಲೆನ ತನ್ನ ಮೊನ್ಸಿಲಿ ನೆನಿವಂಗೆ
॥ ೧ ॥

**॥ ಸೌರಾಷ್ಟ್ರ ತ್ರಿವುಡೆ ॥**

ಬಾರಿ ದಯೆಲವ ಕುದ್ದ್ರ್‌ಸಿ  ಪ ।
ನ್ನೀರ್‌ಲಿನೆ ಪಾದಗಳ ತೊಳ್ದತ್ ।
ನೇರಮಾತ್‌ಲಿ ಲಕ್ಷ್ಮಿ ಗಂಡಗೆ । ಹೇಳ್ತ್ ವಿಸಯ ॥ ೧ ॥

ನಾವ್ಗೆ ಬೇಕಾದವನೆ ನಮ್ಮನೆ ।
ಗೀಗ ಬಂದ್‌ದ್ ನಮ್ಮ ಕುಲಕೆನು ।
ಯೋಗತೇಳ್ಕಂಡ್ ಬಾರಿ ಕುಸಿಲಂವ । ಗೀಗ ಹೇಳ್ತ್ ॥ ೨ ॥

ಮಾನವಂತನೆ ಬಂದ ಕಾರಣ ।
ಏನ್‌ತೇಳೊಕು ನಂಗೆತೇಳ್ಕನ ।
ಬೇನೆಲಕ್ರೂರಾಗ ಹೇಳ್ತನು । ಮಾನಯಿಲ್ದೆ ॥ ೪ ॥

॥ **ಕಾಂಭೋಜಿ ಝಂಪೆ** ॥

ಎಲ್ಲ ತಿಳ್ದಂವ ದೇವ । ಸುಳ್ಳು ಹೇಳ್ತೊಳ ಗೊ ।
ತ್ತಿಲ್ಲೆತೇಳ್ತಲೆ ನಂಗೆ ॥
ಮುಳ್ಳುಬಲ್ಲೆನ ಕುಲಕೆ । ಎಳ್ಕಂಡ್ ಸೋತೊಗೊ ।
ಳೆಲ್ಲ ಹೇಳಿಕೆ ಬಂದೆ ॥ ೧॥

ನಾರದನು ಬಂದೇಳ್ತ್ । ಕ್ರೂರಿ ಕಂಸಗೆ ನಿನ್ನ ।
ಬಾರಿಲೀಲೆನ ಬುಡ್ಸಿ ॥
ಯಾರ ಬುಡಿಕಿಲೆತ ಕೋ ।
ಪೇರಿ ಯಾದವರ ಕುಲ । ಮಾರಿಗಿಕ್ಕಿನೆತೇಳಿ ದುಷ್ಟ ॥ ೨ ॥

ಸಿಕ್ಕ ಯಾದವರೆಲ್ಲ । ಲೆಕ್ಕಿಲ್ಲದೆಯೆ ಕೊಂದ್ ।
ಮಿಕ್ಕವರ್ರ ಸೆರೆಮನೆಲಿ ॥
ಸೊಕ್ಕಿಲವ ಇಸ್ಸುಟುಯ । ದಿಕ್ಕಿಲ್ಲದೆಲ್ಲೋಡ್ಕೆ ।
ಠಕ್ಕಿಲಿಲ್ಲಿಗೆ ನನ್ನ ಕಳ್ಸಿ ॥ ೩ ॥

॥ **ಸೌರಾಷ್ಟ್ರ ತ್ರಿವುಡೆ** ॥

ತಾಳಿ ಒಸಿ ದಿನ ಹತ್ರ ಬಾತುಟು ।
ಹಾಳ್ ಬುದ್ಧಿನ ಮೂಳಯಿವ ನಾ ।
ಆಳಿಕೆನ ಶಿವ ನಿಲ್ಸಿ ಬುಟ್ಟದೆ । ಕೇಳಿ ಮಾತ್ ॥ ೧ ॥

ಬಿಲ್ಲಹಬ್ಬನ ನಡ್ಸಿದೇ ಗಡ ।
ಮಲ್ಲ ಕಂಸ ಹೇಳಿ ಕಳ್ಸಿಟು ।
ಎಲ್ಲ ಬರೊಕುತ ಸೇರಿಯೆಲ್ಲವು । ಅಲ್ಲಿ ಪೋಯಾ ॥ ೨ ॥

ಮೊಸ್‌ರ್ ಬೆಣ್ಣೆನ ಮಡಿಕೆ ಗಾಡಿಲಿ ।
ಇಸ್ಸಿ ಬುಡೊಕುಯ ಬೊಳಿ ಬುಡಿಕನ ॥
ಸೇರ್ಸಿ ಎಲ್ಲರ ನಾವು ಹೊರ್ಡೊಕು । ಮಧುರೆಗಿಂದ್ ॥ ೩ ॥

**॥ ಶಂಕರಾಭರಣ ಮಟ್ಟೆ॥**

ಕಡಲಿಗಿಳ್ತ್ ಸೂರ್ಯದೇವ್ರು ।
ಒಡನೆ ನೀನ್ ರಥಲಿ ಮಧುರೆ । ಕಡೆಗೆ ಹೋಗುತ ॥
ಒಡೆಯನತ್ರ ನಾಳೆ ಬನ್ನೆ ।
ಬುಡುಯ ಚಿಂತೆ ತೇಳಿ ಕೃಷ್ಣ । ದೃಢಲಿ ಕಳ್ಸಿತ್ ॥ ೧ ॥

**॥ ಭಾಮಿನಿ ॥**

ಇತ್ತ ಶ್ರೀಹರಿಯಪ್ಪಣೆನ ತಾ । ಭಕ್ತನಕ್ರೂರಂದ್ ಪಡಿಯಕೆ ।
ಮತ್ತೆ ರವಿಯುದಯಾಚಲಕೆ ತಾ ಬಂದ ಮೆರ್ದತಲೆ
॥ ೧/೨ ॥

**॥ ಮಧುಮಾಧವಿ ಏಕ ॥**

ಯಾರ್‌ಯ ಮಡಿವಾಳ ಕೇಳೊಕು ಮಾತ್ನ ।
ಕಾರಿಯ ಒಂದುಟ್ಟು ಹೇಳ್ನೆ ನೋಡಿತ್ತ ॥
ತೋರ್ವ ಬಟ್ಟೆನ ಗಂಟ್ ಕೊಟ್ ಬುಡು ಇತ್ತ ।
ಭಾರಿ ಗಡಿಬಿಡಿಲೀಗ ಓಡ್ತೊಳ ಎತ್ತ ॥ ೧ ॥

**॥ ಸೌರಾಷ್ಟ್ರ ತ್ರಿವುಡೆ ॥**

ಒಡನೆ ಸಿಟ್ಟ್‌ಲಿ ಹೇಳ್ತ್ ಬಟ್ಟೆನ ।
ಉಡಿಕೆ ಕೊಡಿಕಿಲೆ ದಾರಿದಾರಿಲಿ ॥
ಹುಡುಕು ಬಟ್ಟೆನ ಕೇಳಿ ಕೇಳಿಯೆ । ಹಡ್ಚೆ ಹೈದ ॥ ೧ ॥

॥ **ಮಧುಮಾಧವಿ ಏಕ** ॥

ಖಳರಾಜ ಅಗಸ ಕೇಳ್ ಗೊತ್ತಾತ್ಲೇ ನಿಂಗೆ ।
ಅಳಿಯಂದರ್ ನಾವುಯ ನಿನ್ನೊಡೆಯಂಗೆ ॥
ಎಳ್ದ್ ತಕ್ಕಂಡವೆ ಕೊಡದರೆ ಬಟ್ಟೆ ।
ಉಳ್ಸಿಕಾದರೆ ತೋರ್ಸ್ ನಿಂದೊಮ್ಮೆ ರಟ್ಟೆ ॥ ೨ ॥

॥ **ಭೈರವಿ ಏಕ** ॥

ತಡ್ದ್ ಕೇಳಿಕೆಯಿದ್ ಕಾಡಾ । ಇದ್ ।
ಕೊಡ್ದುಲೆ ನೀವ್ಗೆ ನೋಡಾ ॥
ಹುಡ್‌ಗ್ ಬುದ್ಧಿನ ಬುಡಿಯ । ನಾ ।
ಒಡೆಯಗೆ ಹೇಳ್ನೆ ನೋಡ್ಯ ॥ ೧ ॥

॥ **ವಾರ್ಧಿಕ** ॥

ಇತ್ತ ಕಾಳಗ ನಡೆವ ವರ್ತಮಾನನ ಕೇಳಿ ।
ಮತ್ತೆ ಮನ್ಸಲಿ ಗಡಗಡತ ಹೆದ್ರಿಕಣ್ಕವಗೆ ।
ಸುತ್ತಿಬುಟ್ಟತ್ ತಲೆನೆ ಭೂಮಿಯಾಕಾಸ ಒಮ್ಮೆಗೆ ಕಂಡ್
ಪಸೆಯಾರ್ತಲೆ ॥
ವ್ಯರ್ಥ ಹಸ್‌ಕಾಯೆವ್ನ ಸುಮ್ನೆ ಚಿಪ್ಪಿಕೆ ಹೋಗಿ ।
ಮತ್ತೆ ಬರ್ಸ್ತ ಮುಳ್ಳು ಎಳ್ಕಂದೆತೇಳಿಯವ ।
ಕುತ್ತಹಿಡ್ದವರಂಗೆ ಒಬ್ನೆ ಒಳಸರ್ದ್ ಮಲ್ಕಣಿಕೆ ಕಂಡತವ
ಚೋದ್ಯ ॥ ೧ ॥

॥ **ವಾರ್ಧಿಕ** ॥

ಹಿಂಗೆ ಪುಕ್ಕಲರಂಗೆ ಹೆದ್ರ್‌ತವ ಭಕ್ತಿಲಿಯೆ ।
ಇಂಬುಕೊಡೊ ಶ್ರೀಪತಿನ ನೆನ್ಸ್‌ತಲೆ ಕೋಣೆಲವ ।
ಮುಂಬರುವ ತಡೆಗೇನ ಮಾಡ್ಕಂಡ್ ನಿಲ್ಗಿಕವ
ನಡ್ದೋದದೇನೊ ಮುಂದೆ ॥ ೧/೨ ॥

॥ **ವಾರ್ಧಿಕ** ॥

ಕೆಟ್ಟೋದ ಮೊನ್ಸ್‌ಂದ ಹೆದ್ರಿಕೆಲಿ ನಡ್ಗ್‌ತಲೆ ।
ಕೃಷ್ಣದೇವ್ರನೆ ನೆನ್ಸಿ ಮಲ್ಕಣಿಕೆ ಮಂಚಲವ ।
ಕೆಟ್ಟ ಕನ್ಸ್‌ನ ಅರ್ಗಿ ಸಿಕೆಯಾಗ್ದೆ ಹೆದ್ರಿಕೆಲಿ ದಡ್ಕಬಿದ್ದತ್
ನೆಲಕೆನೆ ॥ ೧/೨ ॥

॥ **ನೀಲಾಂಬರಿ ರೂಪಕ** ॥

ಏನಮಾಡೊಕು ನಾನೇನರ ಕಂಡದ್ ಕನ್ಸಿಲಿಯೆ ॥
ಏನಾವ್ತುಟು ನಾನೇನರ ಮಾಡ್ತೊಳದ್ ॥
ನೆತ್ತಿಗೆ ಎಣ್ಣೆನ ಒತ್ತ್‌ತ ಮಣ್ಣ್‌ನ ಮೈಯಿಡಿ ತಿಕ್ಕಂಡ್ ।
ಕತ್ತೆಲಿ ಕೂರ್ಕರ್ಂಡ್ ದಕ್ಷಿಣ ಕಡೆ ಹೋವದರ ॥
ಕತ್ತಲೆ ಕೋಣೆಲಿ ಕಂಡದ್ ಸತ್ಯದ ಕಣ್ಸಿಯ ।
ಸತ್ತನೆ ಖಂಡಿತ ಹೇಳಿಕೆ ಯಾತಿಲೆ ಮುಗ್ದೋತ್ ॥ ೧ ॥

ಎದ್ದ್ ನಾ ನೋಡಿರೆ ನನ್ನೆದ್ರಿಗೆ ಸತ್ತವು ।
ಎಳ್ದವೆತೇಳ್ಕಂಡ್ ಸುತ್ತುವೆ ಬುಡ್ಕಿಲೆ ನಿನ್ನತೆಲೆ ॥
ಇದ್ದೊಂದೇ ತಲೆ ಉಟ್ಟತ ನೋಡಿಕೆ ।
ಎದ್ದರೆ ಕನ್ನಡಿಲದ್ ಕಾಣ್ತಿಲೆ ದೇವರೆಯಿಂದ್ ॥ ೨ ॥

ಉರಿತಿರೊ ಒಂದೀಪನು ಎರ್ಡಾಗಿಯೆ ಕಾಣ್ತುಟ್ ।
ಅರಮನೆ ಎಲ್ಲನು ನೋಡಿರೆ ಹರಿಮಯ ಆಗೋಗುಟಪ ॥
ಬರ್ಸಿದೆ ತಂಗಿನ ಮಕ್ಕಳ ಕರ್ಸಿದೆ ಈ ಕೃಷ್ಣನ ಅವ ।
ಬರೆನಾಟಕದವ ಲೋಕಲಿತೇಳ್ದರ ಮತ್ತೋರ್ಗಿ ॥ ೩ ॥

॥ **ಭಾಮಿನಿ** ॥

ಹರಹರತಲೇ ಮರ್ಟ್ ಕರ್ಣ್ನ ।
ತೆರ್ದ್ ನೋಡಿಕೆ ತನ್ನ ಅರಮನೆ ।
ಹೊರಗೊಳಕೆ ಶ್ರೀಕೃಷ್ಣಮೋರೆನ ಕಾಂಬಕವ್ನಂದ್ ॥
ತರತರನೆ ನಡ್ಗಂಡ್ ಮನ್ಸಿಲಿ ।
ಹರಿನ ಮೂರ್ತಿನ ಎದೆನ ತಾವ್ರೆಲಿ ।
ದರ್ಸಿದವು ಇವನಂತೆ ಯಾರೊಳ ಮೂರ್ ಲೋಕಲಿತ
॥ ೨ ॥

॥ **ಮಧುಮಾಧವಿ ಏಕ** ॥

ಎದ್ದತ್ ಬೊಳ್ಪುಗೆ ಬೇಗನೆ ಕಂಸ ।
ಕುರ್ದ್ಬು ಹರನ ಪೂಜೆ ಮಾಡ್ತಂಡ್ ಬೇಗ ॥
ಗಡ್ದ್ಲಿ ಊಟನ ಮುಗ್ಸಿಪೀಠೇರಿ ।
ಋದ್ದ್ ಕರ್ಸಿತ್ ತನ್ನ ಬಲನ ಹಂಕಾರಿ ॥ ೧ ॥

॥ **ಮಧುಮಾಧವಿ ಏಕ** ॥

ಚಾಣೂರ ಮುಷ್ಠಿಕರೆಲ್ಲವು ಕೇಳಿ ।
ಬೇನೆನ ಹೇಳ್ತೊಳೆ ನೀವ್ನೊಸಿ ಕೇಳಿ ॥
ಜಾಣ ಚುರ್ಕಿನ ಹೈದ ಗೋವಿಂದ ನಿಲ್ಲಿ ।
ತ್ರಾಣಲಿ ಮೆರೆತುಟು ಕೊಂದ್ಬುಟ್ಟು ತಳ್ಳಿ ॥ ೧ ॥

॥ **ಭೈರವಿ ಏಕ** ॥

ಕಳ್ಳನ ಬುಡ್ಕಿಲೆ ನಿಲವ್ವ । ನಾವ್ । ಕಳ್ಸುವೆ ನರ್ಕಕೆ ತಾಳ್ ॥
ಮಲ್ಲರನಾವೊಳ ದನಿಂಗೆ । ಇದ ।
ರೆಲ್ಲರ ಬುಡು ನೀ ನಾವ್ಗೆ ॥ ೧ ॥

ಸೊಕ್ಕುನ ಹೈದನ ಮೊರ್ಲ್ । ನಾವ್ ।
ಕಕ್ಸುವೊ ಈಗಳೆ ತಾಳ್ ॥
ಮುಕ್ಕಿಸಿ ಬುಟ್ಟವೆ ಮೊಣ್ಣ್ । ಇವ ।
ಲೆಕ್ಕನ ನಾವ್ಗೆ ಕೇಳ್ ॥ ೨ ॥

॥ **ಭೈರವಿ ಏಕ** ॥

ಎಲ ಎಲ ಏನ್ಯ । ನಿಲ್ ನಿಲ್ ಹೇಳ್ತೊಳೆ ।
ತಲೆಕೆಟ್ಟುಟ ಯೇನ್ ॥
ಗಲ್ ಗಲ್ ಮಾಡಿನೆ । ಹಲ್ ಹಲ್ ಮುರ್ದನೆ ।
ಭಲ್ ನಿಲ್ ನೋಡೀಗ ॥ ೧ ॥

॥ **ಶಂಕರಾಭರಣ ಅಷ್ಟ** ॥

ಹಲ್ಲ್ ಮುರಿಯೊದ್ಯಾಕೆ ಮಧುರೆ ರಾಜ ಕಂಸ ಎನ್ನ
ಮಾವ ॥
ಇಲ್ಲಿಗೆಮ್ಮ ಕರ್ಸಿಟಲಯ । ಮಲ್ಲ ಚಾಣೂರ ॥ ೧ ॥

॥ **ಭೈರವಿ ಏಕ** ॥

ಬರ್ಸಿದ್ ಯಾರೆ ಇರಲಿ । ನೀ ।
ತೋರ್ಸಿರೆ ಹಮ್ಮುನ ಇಲ್ಲಿ ॥
ಕಾರ್ಸಿನೆ ನಿನ್ನದ್ ರಕ್ತ । ಬಾ । ತೊರ್ಸಿನೆ ನಂಧ್ಕಸರತ್ತ ॥ ೧ ॥

॥ **ಶಂಕರಾಭರಣ ಅಷ್ಟ** ॥

ಕಾಡ ನಡುಲಿ ದನನ ಮೇಸೊ ।
ಕಾಡ ಹುಡ್ಗ ನನ್ನ ಜೊತೆಗೆ ॥
ನಾಡ ಮನ್ಸ ನೀನ್ ಯುದ್ಧ ।
ಮಾಡ್ದು ಸರಿಯಾದ ॥ ೧ ॥

॥ **ಭೈರವಿ ಏಕ** ॥

ಬುಡುಬುಡು ಗತ್ತ್‌ನ ಮಾತ್ । ನೀ ।
ನಡಿಯೊದು ಈಗಲೆ ಒಳಿತ್ ॥
ನಡೆಕಿಲೆ ನಂಜೊತೆ ರಂಪ । ಬಾ ।
ಕೊಡು ಕಾಳಗ ಎಲೆಲೆ ಹುಡ್ಗ ॥ ೧ ॥

॥ **ಸೌರಾಷ್ಟ್ರ ತ್ರಿವುಡೆ** ॥

ಕೆಟ್ಟವನೆ ನಾ ನಿನ್ನ ಮುಗ್ಸಿಯೆ ।
ಕೊಟ್ಟುಬುಟ್ಟನೆ ನರಕನೊಮ್ಮೆಲೆ ।
ದಿಟ್ಟತನ ನೋಡ್ನೊಮ್ಮೆ ಬಾ ಜಗ । ಜಟ್ಟಿಯಾದ್ರೆ ॥ ೧ ॥

॥ **ಭಾಮಿನಿ** ॥

ಬುಡ್ಬಡಿಯ ವಸುದೇವ ಮಂಜನ ।
ಬೊಡ್ದ್ ಹಾಕ್ಬುಡಿ ಎಲ್ಲ ಮಕ್ಕಾ ।
ಹೊಡೆನಿ ಅಜ್ಜಕ್ಕಳಿಗೆ ಕೊಂದ್ಬುಡಿ ಎಲ್ಲ ವೈರಿಗಳ ॥ ೧ ॥

॥ **ಶಂಕರಾಭರಣ ರೂಪಕ** ॥

ಏನ್ನ ಕೃಷ್ಣ ನನ್ನ ಜೊತೆಗೆ ಇಷ್ಟ್ ಸಲುಗೆನ ।
ಎನ್ನ ಜಾಗ ಏರಿ ಕುದ್ರೆ ಕೊಲ್ವೆ ತಕ್ಷಣ ॥ ೧ ॥

ಮಾಂವ ನಿನ್ನ ಮೇಲೆ ನಂಗೆ ಸಲುಗೆ ಉಟ್ಟುಯ ।
ಯಾಂವ ಕೆಲ್ಸಕಾಗಿ ನಮ್ಮ ಕರ್ದ ಹೇಳಿಯ ॥ ೨ ॥

ಬೊಗ್ಳು ನಿಲ್ಸ್ ನೀನ್ ಸುಳ್ಳತೇಳ್ದು ಗೊತ್ತುಯ ।
ಕಳ್ಸಿ ಕೊಟ್ಟ ಪೂತನಿನ ಕೊಂದದೇಕೆಯ ॥ ೩ ॥

ಜಗದ ಬೊಳ್ಪು ಆಗ ತಾನೆ ನೋಡ್ದ ಮಕ್ಳಿಗೆ ।
ಅಗ್ಯಕೇತ ವಿಷದ ಮೊಲೆನ ಕೊಟ್ಟು ಕೊಲ್ಲಿಕೆ ॥ ೪ ॥

ಹಗೆನ ಕಡೆಂದ ಬಂದ ರಕ್ಕಸೀತ ಗ್ರೇಸಿದ್ ।
ಮಗ್‌ಚಿ ಕೊಂದ್ ಅವ್ಳ ಪ್ರಾಣ । ತೆಗ್ದೆ ನೋಡದ ॥ ೫ ॥

ಬುಟ್ಟ್ ಬುಡಿಯ ನಮ್ಮ ಶಕಟ ಧೇನುಕೆಲ್ಲರ ।
ಮೆಟ್ಟಿ ಕೊಂದ್ವಹನ ಬುಟ್ಟ ನೀನ್ ಹೇಳಿಯ ॥ ೬ ॥

ಕದ್ದ್ ಒಳಗೆ ರೂಪ ತಾಳಿ ಬಂದ ಕಳ್ಳರ ।
ಒದ್ದ್ ಕೊಂದೆ ಸಾಕಾ ಬೇಕ । ಇದ್ದೇಳಿ ವಿವರ ॥ ೭ ॥



# ಶರಸೇತು ಬಂಧ

**॥ ಭಾಮಿನಿ ॥**

ಸದ್ದ್ ಮಾಡದೆ ಭಟ್ರ ಕೇರಿಲಿ ।
ಇದ್ದ ಸಂಪೊತ್ತೆಲ್ಲ ಲಾಯ್ಕಲಿ ।
ಕದ್ದ್ ಬುಡ್ತಿದ ಕಳ್ಳ ಕಾಕರ ಒದ್ದ್ ಹಾಕಂಡ್ ॥
ಮೊದ್ವೆಯಾತುನು ಬಾರಿ ಕುಸಿಲೆ ।
ಗಡ್ದ್ ಮಾಡದೆ ಲೂಪಿಗೂಡೆನ ।
ಇದ್ದವಳ ಜೊತೆ ಮಂಜ ಹುಟ್ಟಿಕೆ ಮುಂದೆ ಹೊರ್ಟತವ
॥ ೧ ॥

**॥ ತುಜಾವಂತು ಝಂಪೆ ॥**

ಅರಸ ಕೇಳೊಕು ನೀನ್ ಅಲ್ಲಲ್ಲಿ ಸಿಕ್ತಿದ್ದ ।
ಪರಮ ಪಾವನ ಪುಣ್ಯಕ್ಷೇತ್ರಯೆಲ್ಲರಲಿ ॥
ನರನಾಗ ಮೀಕಂಡ್ ಬಾತಿರುವ ಹೊತ್ತಿಗೇ ।
ಅರರೆ ಕಂಡತ್ ದೊಡ್ಡ ಸೇತುವೆನ ಮುಂದೆ ॥ ೧ ॥

ಬಂದಲ್ಲಿ ಶ್ರೀರಾಮ ಕಟ್ಟಿದ್ದ ಸೇತುವೆನ ।
ಅಂದ್ ತಾ ನೋಡಿ ಮನಸಿಲೆ ಪಾರ್ಥ ಕುಸಿಲೆ ॥
ಚಂದಲೀ ಕಟ್ಯೊಳತ ನೆನ್ಸಿಕನ ನೋಡ್ತಾಗ ।
ಮುಂದೆ ನಿಲ್ಗಂಡ್ ಮಂತ್ರನ ಹೇಳ್ವ ಕಪಿನ ॥ ೨ ॥

ಯಾರಯ್ಯ ಮಂಗಣ್ಣ ಹಿಂಗೆ ನೀ ಸಾಗರದ ।
ತೀರಲೀ ಮನೆ ಮಾಡಿ ಕೊಂಡೊಳಾ ಯಾಕೆ ॥
ಕಾರಣನ ಹೇಳೊಕುತ ಕೇಳಿಕನ । ಮಾರುತನ
ಮಗ ಹೇಳ್ತ್ ಹಿಂದೆನಾ ಕತೆನ ॥ ೩ ॥

ಪ್ರಾಣ ರೂಪಲಿಯಿರುವ ಗಾಳಿಯೆನ್ನಪ್ಪಯ್ಯ ।
ಕ್ಷೀಣಬಲ ಹನುಮ ನಾನ್ ಎಂತ ಹೇಳುವೆಯ ॥
ಕಾಣ್‌ತಿರೋ ಲೋಕಲಿತ ಹೇಳಿಕನ ಅರ್ಜುನನ್
ತ್ರಾಣಲೇ ಹೇಳ್ತವಂಗೆ ನಂಬೊಕಾ ಯಿದರ ॥ ೪ ॥

ಹನುಮಾಂತ ಹೇಳ್ತೊಳಯ ನೋಡಿರೇ ಮುದಿಮಂಗ ।
ಸಣಕಲನ ಹಂಗೆ ಕಾಣ್ತೊಳಯ ನಂಗೆ ।
ಘನದೇಹ ಮಾರುತಿಗೆ ಉಟ್ಟೊತ ಹೇಳುವೆಯ ।
ಮನಸಿಗೇ ಬಂದಾಂಗೆ ಹೇಳ್ಬಡಂತೇಳ್ತ್ ॥ ೫ ॥

**॥ ಘಂಟಾರವ ಅಷ್ಟ ॥**

ಕೇಳೊಕುಯ ನೀ ನಮ್ಮ ಕಥೆನಾ ।
ಹೇಳಿ ಮುಗೆದೋ ಅಂದ್ ಕಡಲಿಗೆ ।
ನೀಳ ಸೇತುವೆ ಕಟ್ಟಿಕೆ ॥ ೧ ॥

ತಾಳಿ ಗಿರಿಬಂಡೆಗಳ ಮರನಾ ।
ತೋಳ ಬಲಲೀಯೆತ್ತಿ ದೇಹನು ।
ಕಾಲು ಕೈಯಿನು ಚುರುಂಟಿ ಹೋತಲೆ ॥ ೨ ॥

**॥ ಸೌರಾಷ್ಟ್ರ ತ್ರಿವುಡೆ ॥**

ಹೊತ್ತು ಬೊಚ್ಚುದು ಯಾಕೆ ಗುಡ್ಡೆನ ।
ಎತ್ತುದ್ಯಾಕೆಯ ಬಂಡೆ ಮರಗಳ ।
ಮತ್ತೆ ಸುಮ್ಮನೆ ಬೊಚ್ಚಿದೇಕೆಯ । ಇತ್ತಕೇಳ್ ॥ ೧ ॥

ಬುಡುಬುಡೂ ಸೇತುವೆನ ಕಟ್ಟಿಕೆ ।
ಗಡಿಬಿಡಿನ ನೀ ಯಾಕೆ ಮಾಡ್ಯೊಳ ।
ಒಡನೆ ಕಟ್ಟಿನೆ ನೋಡು ಬಾಣಲಿ ।
ಬುಡುಯ ಚಿಂತೆ ॥ ೨ ॥

ಇಂದ್ರನೈರಾವತನ ಭೂಮಿಗೆ ।
ತಂದ ಗಟ್ಟಿಗ ಯಾರೊಳಯ ಹೇಳ್ ॥
ಒಂದು ತಿಳಿಯದೆ ಹೊಡ್ಕಣಿಕೆ ನೀ ।
ಮುಂದೆ ಬಂದೆ ॥ ೩ ॥

**॥ ಮಾರವಿ ಏಕ ॥**

ಏನರ ಹೇಳ್ತೊಳ । ಮಾನವಜಾತಿಯೆ ।
ನಾಯಾರ್‌ತ ಮರ್ತ್ ॥
ತ್ರಾಣಲಿ ನನ್ನಸ । ಮಾನರ್ ಯಾರೊಳ ।
ನೋಣಯ ತೋರ್ಸಿಬುಡು ॥ ೧ ॥

ಮುಕ್ಕಿನೆ ಲೋಕನ । ತಿಕ್ಕಿನೆ ಕಾಲನ । ಲೆಕ್ಕನ ಶಿವನಂಗೆ ॥
ಪಕ್ಕನಾ ನಿಳ್ಸಿನೆ । ಹೊಕ್ಕಿರುದರನೇ ।
ಸೊಕ್ಕ್‌ಲಿ ಬೊಗ್‌ಳ್‌ಬಾಡ ॥ ೨ ॥

ಬುಟ್ಟೇ ಬಾಣಲಿ । ಕಟ್ಟಿದ ಸೇತುವೆ ।
ಮೆಟ್ಟಿಯೆ ಬೀಳ್ಸದರ ॥
ದಿಟ್ಟತ ಹೇಳುವ । ಗಟ್ಟಿ ಬಿರುದು ನಾ ।
ಕೊಟ್ಟನೆ ನಾನಿಂಗೆ ॥ ೩ ॥

॥ **ಆರ್ಯಸವಾಯ್ ಏಕ** ॥

ಎಲೆ ಮೊಂಯಿಸನೆ ಕೈ । ಚಳಕನ ತೋರ್ಸ್ಯ ।
ಕಳೆಗುಂದುಟು ಮುಖ ಯಾಕೀಗ ॥
ವಲಿಮುಖದವು ನಾವ್ । ಬಲುದೀರರ್ ನೀವ್ ।
ಸಲುಗೆನ ತೋರ್ಸಿರೆ ಗತಿಯಿದೆಯ ॥ ೧ ॥

ಆಡಿದ ಬಾಸೆನ । ಮಾಡಿಕೆ ಸ್ವಲ್ಪನು ।
ಕೂಡದರೆ ನೀ ನಡಿ ಬೇಗ ॥
ಕಾಡುದುಲೆಯ ನೀ । ಹೇಡಿತ ಗೊತ್ತುತ ।
ಮೋಡಿಲೆ ನಕ್ಕಂಡ್ ಹೇಳ್ತಾಗ ॥ ೨ ॥

॥ **ಸೌರಾಷ್ಟ್ರ ರೂಪಕ** ॥

ಅಯ್ಯೊ ದೇವರೇ ಮಾನ ಹೋತಲೇ ।
ಮುಯ್ಯಿತೀರ್ಸಿತ್ ನನ್ನ ಸೊಕ್ಕಿಗೆ ।
ಕಯ್ಯಿ ಮೀರ್ತಲೇ ಮಕ್ಕಳಾಟಲಿ ।
ಕಾವ ಕೃಷ್ಣನೇ ದಯೆನುಯಿಲ್ಲೆನಾ ॥ ೧ ॥

ಸಾಕ್ ಸಾಕಪಾ ಬಾಳ್ ಹೋತಲೇ ।
ಈಕುರೇ ಜೊತೆ। ಜಗಳ ಮಾಡ್ಬುಟ್ಟ್ ॥
ಏಕೆ ಬೊದ್ಕೊಕು ಮಾನ ಕೆಟ್ಟ್ ನಾ ।
ಬಾಕಿ ಬಾಳ್ವೆಗೆ ಕಿಚ್ಚಿ ಕೊಟ್ಟನೆ ॥ ೨ ॥

॥ **ಭಾಮಿನಿ** ॥

ಮಾನಯೆಲ್ಲನು ಹೋದ ಮೇಲೆನು ।
ನಾನ್ ಬೊದುಕುದು ಯಾಕೆತೇಳಿಯೆ ।
ಗ್ಯಾನ ಮಾಡ್ಕನ ವಿಪ್ರರೂಪಲಿ ಹರಿಯೆ ಬಾತಾಗ ॥ ೧\೨ ॥

॥ **ಬೇಗಡೆ–ಅಷ್ಟ** ॥

ಏನ್ ನಡೆತುಟ್ ನಿಮ್ಮ ನಡುವೀಗಾ ।
ಸಾಕಪ್ಪ ನಿಲ್ಸಿಯ । ನಾನ್ ಹೇಳ್ದರ ಸ್ವಲ್ಪ ಕೆಬಿಕೊಡಿಯಾ ॥
ನೀನ್ ಯಾಕಗ್ನಿಗೆನೆ ಒಸಿ ಅನು ।
ಮಾನಯಿಲ್ಲದೆ ಹಾರ್ನೆತೇಳಿಯ ॥
ಮಾನವಂತನೆ ನಿಂಗೆಯಿದುನೂ ।
ಗ್ಯಾನಬಾರದೆ ಹೋತಯಯ್ಯೋ ॥ ೧ ॥

ಬಂದದೇ ನೆಗೆ ನಿಮ್ಮ ಕತೆ ಕೇಳಿ । ನಂಗೊಮ್ಮೆ ಪೊರ್ಲುಲೆ ।
ಇಂದೆ ಶೌರ್ಯನ ನೋಡೊಕೂಯಿಲ್ಲಿ ॥
ಚಂದಲೀ ನೀ ಮೂರು ಸರ್ತಿನು ।
ಇಂದ್ ಮಾಡ್‌ದ ಬಾಣ ಸೇತುವೆ ।
ಕುಂದದೇ ಯಿವ ಮುರ್ತುತೇಳ್ಕಂಡ್ ।
ಮುಂದೆ ನೋಡದೆ ಸತ್ತ್ ಹೋದ್ಯನಾ ॥ ೨ ॥

ಬಾಣಬುಟ್ಟುದು ಸೇತು ಮಾಡ್ಕಾನ । ಕಪಿವರ್ಯ ನಿಮಿಷಲಿ ।
ತ್ರಾಣಲದರ ಮುರ್ದು ಹಾಕ್ಕಾನ ॥
ಮಾನವರ್ ನೋಡ್ಯೊಳನ ಹೇಳ್ ನಿ ।
ದಾನಲೀ ಒಸಿ ಯೋಚಿಸೊಕುಯಾ ।
ಮಾನಗೆಟ್ಟಂತ ಕೆಲ್ಸ ಮಾಡದೆ ।
ನೀನ್ ಕಿಚ್ಚಿಗೆ ಹಾರ್ದು ಸರಿಯಾ ॥ ೩ ॥

ಮಾಡಿ ತೋರ್ಸಿ ಒಮ್ಮೆ ಶಪಥಾನ ।
ಸಾಕ್ಷೀನ ಹೇಳಿನೆ । ನೋಡಿ ನಾನೆ ನಿವ್ಗೆ ಸತ್ಯಾನ ॥
ಹೂಡಿ ಬಾಣನ ಕಟ್ಟಿಯರ್ಜುನ ।
ಗಾಢಸೇತುನ ಮಾಡಿಬುಡ್ಕನ ।
ದೂಡಿ ಕಪಿ ಹೊಡಿಮಾಡಿಬುಟ್ಟರೆ ।
ಆಡಿದಂಗೆನೆ ಹಾರಿಬುಡುಯಾ ॥ ೪ ॥

**॥ ಶಂಕರಾಭರಣ ಮಟ್ಟೆ ॥**

ವೀರಪಾರ್ಥ ಮತ್ತೆ ಕೋಪ । ಏರಿ ಅಕ್ಷಯಾಸ್ತ್ರಲಂದ್ ।
ವಾರಿನಿಧಿಗೆ ಸೇತುಮಾಡ್ಕೆ ॥
ಮಾರ ಜನಕ ಧರಿಸಿ ಕೂರ್ಮ । ಕಾರ ರೂಪಲಿ ॥ ೧ ॥

ಅರರೆ ರಾಮಭಕ್ತತೇಳ್ವ । ಬಿರುದು ಹೋಗಿಬುಟ್ಟ ಮೇಲೆ ।
ಇರುದು ನಾನ್ ಯೇಕೆತೇಳಿ । ಮರ್ಟ್ ಕಂಡತ್ ॥ ೨ ॥

ಪವನಸುತನ ಮನದ ಬೇನೆ ।
ಭವವಿದೂರ ಹರಿನು ಕಂಡ್ ॥
ಅವನ ಯೆದುರು ರಾಮನಾಗಿ । ಅವತರಿಸಿಕೆನೆ ॥ ೩ ॥

**॥ ವಾರ್ಧಿಕ ॥**

ಶ್ರೀರಾಮ ಘನಶ್ಯಾಮ । ಧೀರ ಧನುರ್ಧಾರಿ ಮುನಿ
ವಾರ ಸಂಪೂಜ್ಯ ಬಂದೋಳನ ನೀ
ಯೆನ್ನಮೊರೆ ಕೇಳಿ ನಿಂದೋಳನ ದೇವ ॥
ಬಾರಿ ಪಾಪನ ಮಾಡ್ದ ದಶಶಿರನ ಕೊಂದಂತ
ವೀರ ಕರುಣಾಸಿಂಧು ಚಿನ್ಮಯನೆ ।

ದಾರಿಕಾಣ್ತಿಲೆ ನಂಗೆ ನೀನೆ ಕಾಯೊಕುತೇಳಿ
ಅತ್ತ್ ಹೇಳ್ತಾಗ ಹನುಮ ॥ ೧ ॥

**॥ ಕೇದಾರಗೌಳ –ಅಷ್ಟ ॥**

ವಾತ ಜಾತನೆ ಕೇಳ್ ಸುಮ್ಮನೆ ಮನ್ಸಿಲಿ ।
ಸೋತೆತ ನೆನ್ಸ್ ಬಡ ॥
ಆತನ ಪಕ್ಷಲಿ ನಾ ಬಂದ್ ನಿತ್ತೊಳೆ ।
ಸೇತುನ ವಿಷಯಲಿಂದ್ ॥ ೧ ॥

ಈಗ ಕೃಷ್ಣವತಾರಲೀ ಬಂದ್ ನಾ ಸಖ ।
ನಾಗೊಳೆ ಪಾರ್ಥಗಿಂದ್ ॥
ಹೇಗೋ ನೀ ಹಂಗೆನೆ ಯಿವನುನು ಭಕ್ತನ್ ।
ಹೋಗು ಮಾತಾಡಿಸಿಯ ॥ ೨ ॥

ಉಟ್ಟು ನಿನ್ನಂದ ಮುಂದೆಗೆ ಕೆಲ್ಸಯಿವಂದಲೆ ।
ಕೆಟ್ಟವಯಿವನಲ್ಲಪ್ಪಾ ॥
ದಿಟ್ಟನು ಹೌದಪ್ಪಾ ।
ಬರಿ ಮಾತ್ ಎಂತಕೆ ಬುಟ್ಟು ಬುಡೀ ಜಗಳ ॥ ೩ ॥

**॥ ಸಾಂಗತ್ಯ ರೂಪಕ ॥**

ವೀರ ಕೇಳೊಕು ನಿನ್ನ ಶಕ್ತಿನ ತಿಳಿಯದೆ ।
ಪೌರುಷ ತೋರ್ಸಿದೆ ಬರಿದೆ ॥
ಯಾರಿಗು ಸೋಲ್ಸಿಕಾಕಿಲೆ ನಿನ್ನ ನರರ್ ವೃಂ ।
ದಾರಕ ವರ್ಗಲಿ ಸತ್ಯ ॥ ೧ ॥

ಸುಮ್ಮನೆ ಮಾತ್ಯಾಕೆ ಕರುಣೆಲಿ ಕಾಯೊಕು ।
ಹಮ್ಮೆಲ್ಲ ಯಿಳ್‍ದೋತ್ ನಂದ್ ॥
ದಮ್ಮಯ್ಯ ಕ್ಷಮಿಸ್‍ತ ಹೇಳ್ಕನ ಮಾರುತಿ ।
ಸಮ್ಮತದಿಂದಾಗ ಹೇಳ್ತ್ ॥ ೨ ॥

ನರ ನೀನ್ ಕೇಳೊಕು ಹರಿ ಒಟ್ಟಿ ಗಿರಿಕನ ।
ಕರುಣೆಲಿ ಕಾದದೆ ನಿನ್ನ ॥
ಬರುವೆನಾ ನೀ ನೆನ್ನಿಕನತೇಳಿ ಪಾರ್ಥನ ।
ಮರುತಜ ಕಳಿಸಿತ್ ಕುಸಿಲಿ ॥ ೩ ॥



# ಕೃಷ್ಣಾರ್ಜುನ ಕಾಳಗ

॥ **ಭಾಮಿನಿ** ॥

ಇತ್ತ ಹಿಂಗಿರಿಕಾಗ ಪಾಂಡವರ್ ।
ಅತ್ತ ಏಳನೇ ದಿನಲಿ ಪುರುಷೋ ।
ತ್ತಮನ್ ಒಳಕಣ್ಣ್‌ಳನೆ ತೆರ್ಕಂಡ್ ನೋಡ್ತಿರಿಕೆಯಂದ್ ॥
ಉತ್ತರದ ದೊರೆಮಂಞ ಪ್ರೀತಿನ ।
ಪಾರ್ಥನಕ್ಕಳೆ ಸಾಯ ಕೇಳ್ದರ ।
ಮತ್ತೆ ನಕ್ಕಂಡ್ ತಂಗೆನೊಟ್ಟಿಗೆ ಹೇಳ್ತ್ ನಡ್ದದರ ॥ ೧ ॥

॥ **ಕಲ್ಯಾಣಿ ಅಷ್ಟ** ॥

ತಂಗೆವ್ವ ಕೇಳ್ ಸೌಭದ್ರ । ಒಳ್ಳೆ ।
ಸಂಗತಿ ನಡ್‌ತಲೆ ಕೇಳ್ದಾ ॥ ಪ ॥
ನಾನೊಂದ್ ದಿನ ಬೊಳ್ಪುಗೆದ್ದ್ । ನದಿ ।
ಸ್ನಾನ ಮಾಡ್ಕಂಡರ್ಘ್ಯ ಕೈಲಾಗ ಹಿಡ್ದ್ ॥
ಮೌನಲಿರಿಕೆ ನಾನ್ ಕುಸಿಲಿ । ಇರಿ ।
ಕೇನೇಳ್ಳಿ ಗಯ ಹೇಳ್ವ ಹೈದಾಗ ದಾರ್ಲಿ ॥ ೧ ॥

ಕುದುರೆನ ಏರ್ಕಂಡ್ ಬಾತ್ । ನೋಡ್ ।
ಹೈದ ಸವಾರಿ ಬಗೆಬಗೆಲಿ ಮಾಡ್ತ್ ॥
ಕುದುರೆ ಬೆಗ್‌ರರ್ಘ್ಯಕೆ ಬೀತ್ । ಕೋಪ ।
ಲದ ನೋಡಿ ಇವ ಆಣೆಯಾಗಲೆ ಮಾಡ್ತ್ ॥ ೨ ॥

ಪಾರ್ವತಿ ಹೇಳ್ದಂಗೆ ಮಾಡ್ತ್ । ಶಿವ ।
ದೇವ್ರಲಿ ನಡ್ದರ ಹೇಳ್ತ್ ॥
ನಾರದ ಉಪದೇಶ ಮಾಡ್ತ್ । ಉಳ್ಸೊ ।
ಕಾರ ಪಾರ್ಥನೆ ಸರಿ ಕಾಲ್ ಹಿಡ್ಕತ್ಹೇಳ್ತ್॥

ಏಳೊಂದನೆನ ದಿನದೊಳ್ಗೆ । ಅವ್ನ ।
ಬಾಳ್ ಮುಗ್ಸದರಗ್ನಿ ಕುಂಡದ ಒಳಗೆ ॥
ಬೀಳ್ನೆನಾತೇಳುವ ಶಪಥ । ಗಯ ।
ಕೇಳಿ ಹೆದ್ರಿಯೆ ಲೋಕ ಸುತ್ತಾಡಿ ತಿರ್ಗ್ತಾ ॥ ೧ ॥

ನಿನ ಗಂಡ ಕೇಳ್ತಾಗ ಕಥೆನ । ಹೇಳ್ತ್ ।
ಮೊನ್ಸಲಿ ಕೊರೆತಿರೊ ಈ ದೊಡ್ಡ ವ್ಯಥೆನಾ ॥
ಕ್ಷಣಲಿ ಬುಡೊಕುತೇಳಿ ಮಾತ್ । ಕೊಟ್ಟ್ ।
ಎಣ್ಸಿದಾತ್ಲರೆ ಹೇಳ್ತ್ ಹೋವೆನಾ ಸತ್ತ್ ॥ ೨ ॥

**॥ ಭಾಮಿನಿ ॥**

ಇಂದ್ ನಾರದ ಮಾಡ್ದ ಸೀಂತ್ರಿಯೆ ।
ಮುಂದ್ವರ್ದ್ ಕಚ್ಚಾಟ ನಡ್ದತ್ ।
ಬಂದದರ ಸರಿಮಾಡ್‌ತೇಳಿಕೆ ಮತ್ತೆ ರುಕ್ಮಿಣಿನು ॥ ೧/೨ ॥

**॥ ಆರಭಿ ಏಕ ॥**

ಆತಾತ್ ಪಾಂಡೊವ್ರು ಪಂಚಪ್ರಾಣತ ಹೇಳಿ ।
ಬಾಯ್ತುಂಬ ಹೇಳ್ಕಂಡ್ ಹೊತ್ತರಿ ತಲೆಲಿ ॥
ಈ ಸ್ಥಿತಿ ಕೊಡ್ತಲೆ ಅರ್ಜುನ ನೆಂಟ್ರಲೆ ।
ಪ್ರೀತ್ಯವ ನಿಮ್ಮ ನುಂಗಿಕೆ ಬಾತ್ ದೇವ್ರೇ ॥ ೧ ॥

ಬಲರಾಮ ದೇವ್ರುನ ವಂಚಿಸಿ ತಂಗೆನ ।
ತಲೆಕೆಟ್ಟ್ ಪಾರ್ಥಂಗೆ ಕೊಟ್ಟದಕಿಂದ್ ॥
ಫಲಕೊಟ್ಟೊ ಭೀಮಾರ್ಜುನರ್ ನಾವ್ಗೆ ಲಾಯ್ಕಲಿ ।
ಬೆಳ್ಸಕಾ ಇಂಥ ನೆಂಟಸ್ತಿಕೆ ಹೇಳಿ ॥ ೨ ॥

ಒಳ್ಳೆದಾಕಿಲೆ ಮುಂದೆ ಈ ನೆಂಟ್ರ ಸಾವಾಸ ।
ತಳ್ಳಿ ಬುಡ್ನಿತ ದಾಕ್ಷಿಣ್ಯನ ತೋರ್ಸ್ದೆ ಹೇಳ್ದೆ ॥
ಎಲ್ಲ ಕೇಳ್ಸ್ಕಂಡ ಸೌಭದ್ರೆ ಬೇಜರಲಾಗ ।
ಮೆಲ್ಲ ಅತ್ತಿಗೆ ಹತ್ರ ಹೇಳ್ತಾಗ ಹಿಂಗೆ ॥ ೩ ॥

॥ **ಕಲ್ಯಾಣಿ ಅಷ್ಟ** ॥

ಹಂಗ್ಸುದು ಬೇಡತ್ತಿಗೆ । ಸಣ್ಣತ್ತಿಗೆ ।
ಹಂಗ್ಸುದು ಬೇಡತ್ತಿಗೆ ॥ ಪ ॥
ಹಂಗ್ಸುದೆಲ್ಲ ಬೇಡ ನೀನ್ ।
ಹಂಗ್‌ನೊಳ್ಗೆ ಒಳೆಯ ನಾನ್ ॥ ಅ.ಪ ॥
ಹಿಂದೆ ಪಾರ್ಥಗೆ ಕೊಟ್ಟ್ ನನ್ನನೇ ।
ನೀಯಿಂದ್ ನನ್ನ ।
ಮುಂದೆ ಬೊಯ್ದರೆ ಇನ್ನ್ ಫಲಯೇನ್ ।
ಬಂದ್ ಹಳಿಕೆ ತನ್ನಿಂದಲಣ್ಣನ ।
ಮುಂದಲೆನ ನಾ ಕೊಯ್ತ್ನೊ ಕೇಳಿಯ ॥ ೧ ॥

॥ **ಭಾಮಿನಿ** ॥

ಅಣ್ಣ ಕೃಷ್ಣನ ನೋಡಿ ತಂಗೆನ ।
ಕಣ್ಣ ನೀರುಕ್ಕುಕ್ಕಿ ಹರ್ದತ್ ।
ಇನ್ನಿವಳ ಬೇಜರನ ಕಳ್ಯಕೆ ಮಾಡ್ತ್ ಹಿಂಗಾಗ ॥

ನಿನ್ನಿಂದಲು ನೂರ್ಪಟ್ಟ್ ದುಃಖಲಿ ।
ನಿನ್ನಣ್ಣ ಬೇಯ್ತುಳೆತೇಳಿ ನಾಟಕ ।
ಸಣ್ಣಲೇ ಸುರುಮಾಡ್ತ್ ಶ್ರೀಹರಿ ತಂಗೆನೆದ್‌ರ್ ॥ ೧ ॥

॥ **ನೀಲಾಂಬರಿ ಅಷ್ಟ** ॥

ಏನ ಮಾಡೊಕು ನಾನ್ ತಂಗೆ ಸೌಭದ್ರೆ ಹೇಳ್ ।
ಮಾನ ಹೋತಲೆ ನೋಡು ಇನ್ನೇಕೆ ಬಾಳ್ ॥
ನಾ ಗಯಗೆ ಭಾಷೆ ಕೊಟ್ಟ್ ಸೋತೋದೆಯ ।
ಈ ನರಕನ ತಂದ್ ಬುಟ್ಟತ್ ನೋಡ್ಯ ॥ ೧ ॥

ಅರಸನಲ್ಲಿಗೆ ಹೋಗಿ ಸಂಧಾನನಾ ಮಾಡಿ ।
ಕರ್ಕಂಡ್ ಬಾವನ ಗಯನ ಸೌಭದ್ರೆ ॥
ಕೌರವ ಗೇಲಿ ಮಾಡದ ಹಂಗೆ ಅರ್ಜುನ ।
ಇರುವಂಗೆ ತಿಳ್ಸಿಯ ಹೋಗು ಸೌಭದ್ರೆ ॥ ೨ ॥

॥ **ಭಾಮಿನಿ** ॥

ಹರಿನು ಹೇಳ್ದರ ಕೇಳಿ ನೀನೆ ।
ಬರುವ ಕಷ್ಟಕೆ ದಾರಿ ತೋರ್ಸ್‌ತ ।
ಹೊರ್ಟ್ ಕಾಮ್ಯಕ ವನಕೆಯಾಗಲೆ ಬಾತ್ ಸೌಭದ್ರೆ
॥ ೧/೨ ॥

ಬಾಡಿ ಹೋಗ್ಬುಟ ಮುಖಲಿ ಮೊರ್ಟ್ಕಂಡ್ ।
ಓಡಿಕಂಡ್ ಬಂದಾಗ ಗಂಡನ ।
ಕಾಡಿಬೇಡ್‌ತ್ ನೀನೆ ಕರುಣೆಲಿ ಕಾಯೊಕುತೆಲೆ ॥ ೧/೨ ॥

**॥ ಬೇಗಡೆ ಏಕ ॥**

ಬಂದ ಕಾರ್ಯ ಹೇಳ್ ಚಿನ್ನ ।
ಕಂದಿ ಹೋವ್ಹು ಮೋರೆನೇ ॥
ಒಂದು ಬುಡದೆ ಹೇಳ್ ಕಷ್ಟ ।
ನಿಂದ್ ಕಳ್ದ್ ಬುಟ್ಟನೇ ॥ ೧ ॥

**॥ ಕಾಪಿ ಅಷ್ಟ ॥**

ಮನ ಗೆದ್ದವನೆ ಮಾತ್ ಕೇಳ್ಯ । ನನ್ನ ।
ಮೊನ್ಸ್‌ನ ಬೇನೆಗೆ ಒಸಿ ಕಿವಿ ಕೊಡಿಯ ॥
ಧನದೊಡ್ಯ ಮೊಂಜನ ಇಂದ್ । ನಾವು ।
ಅಣ್ಗಿಸಿ ಬರೆ ಮೋಸ ಆತಿಯ ನೋಡ್ ॥ ೧ ॥

ನಾಳೆ ಹಿಂಬೊತ್ತಿಗೆ ಗಯನ । ಯಮ ।
ನಾಲಯ ಕಳ್ಸದೆ ಉಳ್ದರೆ ಅಣ್ಣ ॥
ಗಾಳಿ ಗೆಳೆಯಕಿಚ್ಚಿ ಕುಂಡಕೆ ಬಿದ್ದ್ । ಹೋನೆ ।
ತೇಳಿಯೆ ದುಃಖಲಿ ಹೇಳ್ತ್ ನಂಗಿಂದ್ ॥ ೨ ॥

ಬೇಡ್ತೊಳೆ ಕೈಮುಗ್ದ್ ನಿಮ್ಮ । ಸುಮ್ನೆ ।
ಕಾಡದೆ ಬುಡೊಕಡ ನೀವಾ ಗಯನ್ನ ॥
ನಾಡೊಡೆಯನ ಭಾಷೆ ಸಲ್ಸಿ । ಅವ ।
ಕೇಡ್‌ನ ನೀವ್ ಯೋಚಿಸಿ ಬಗೆಹರ್ಸಿ ॥ ೩ ॥

ಒಳ್ಳೇದಲ್ಲ ಗಡಯ ವೈರ । ನಮ್ಮ ।
ಗೇಲಿ ಮಾಡ್‌ವ ಗಡಯ ಹಗೆಗ ಪೂರ ॥
ಸಿರಿವಂತ್ರ ಜೊತೆ ಬಡವಂಗೆ । ಹೇಳ್ನೆ ।
ಸರಿಯಾದೊ ಕಾಳಗ ನೀ ಹೇಳ್ ನಂಗೆ ॥ ೪ ॥

॥ **ವಾರ್ಧಿಕ** ॥

ಕೇಳಿ ಕಿಡಿಕಾರ್ಕಂಡ್ ಹೇಳ್ತ್ ನರ ಸಿಟ್ಟೇರಿ ।
ಕೇಳ್ ಮಹ ರಾಜನಾಜ್ಞೆನ ಮೀರ್ರೆ ಕೈಹಿಡ್ದ್ ।
ಬಾಳ್ಕೊಟ್ಟ್ ಹೆಣ್ಣ್ ಬೇರವಗೊಳ್ದ್ರೆ ಕಲ್ತವ್ನ ಮೊರ್ಯಾದೆ
ಸಭೆಮಧ್ಯಲಿ ॥
ಹೀನರಂಗೆನೆ ತೆಗೆದು ಈ ಮೂರು ಅಪಮಾನ ।
ಮಾನಯಿರೊ ಮೊನ್ಸರಿಗೆ ಶಸ್ತ್ರ ಇಲ್ಲದ ವಧೆಯ ।
ಪ್ರಾಣಯಿರೊವರೆಗೆ ಕೃಷ್ಣಗೆ ಹೆದ್ರಿ ಗಯನ ಬುಡ್ದುಲೆ
ಹೋಗಿದರ ಹೇಳ್ಯ ನೀನ್ ॥ ೧ ॥

(ಸುಭದ್ರೆಯ ನಿರ್ಗಮನ)

॥ **ಭಾಮಿನಿ** ॥

ಒಂದು ಬುಡ್ದೆಲೆ ಗಂಡ ಹೇಳ್ದರ ।
ಅಂದ್ ಬಂದಣ್ಣಂಗೆ ಹೇಳಿಕೆ ।
ಇಂದ್ ಕೆಲ್ಸಕೆ ಕಾಲ ಕೂಡಿಟುತೇಳಿ ದಾರುಕಗೆ ॥ ೧/೨ ॥

॥ **ಬೇಗಡೆ ಏಕ** ॥

ಬರೊಕು ದಾರುಕ ಒಮ್ಮೆ ನೀನಿತ್ತ ।
ಪಾಂಡವರ್ ಕಾಮ್ಯಕ ।
ಅರಣ್ಯಲೊಳ ಮಾತಾಡ್ಸಿ ಬರೊಕಿತ್ತ ।
ಅರಿಕೆ ಮಾಡೊಕು ಮೊದ್ಲ್ ಸಾಮಲಿ ।
ಸರಿಬರದರೇ ಭೇದೊಪಾಯನ ।
ಸೆರಿಲೆ ಬಳ್ಸಿಕ ಬಗ್ಗದಿದ್ದರೆ ।
ಇರುವ ದಂಡಲಿ ಬುದ್ಧಿ ಕಲ್ಸೊಕು ॥ ೧ ॥

**॥ ವಾರ್ಧಿಕ ॥**

ಹರಿಕಳ್ಸಿಸಿರುವ ಓಲೆ ತಲೆಮೇಲೆ ಹೊರ್ಕಂಡ್ ।
ಹರಿಪದನ ನೆನ್ಸ್ಕಂಡ್ ಪಾರ್ಥ ಓದಿತ್ ಓಲೆ ಸಭೆ ಮಧ್ಯೆ
ಕುಸಿಲಾಗಳೆ ॥ ೧/೨ ॥

**॥ ವಾರ್ಧಿಕ ॥**

ಹೇಮಲಂಬಿ ಸಂವತ್ಸರದ ಚೈತ್ರ ಶುದ್ಧ ಕಳ್ ।
ದಾ ಮಹಮವಾಸ್ಯೆ ಸೋಮಗ್ರಹಣ ತಮ ಯೋಗ ।
ಆ ಮಹಾ ವಿಷಕಳ್ಡ್ ದ್ವಾರಕೆನ ಶ್ರೀಕೃಷ್ಣ ಬರ್ದ್ ಕಳ್ಸಿಸುಟ್
ಓಲೆನ ॥ ೧/೨ ॥

**॥ ವಾರ್ಧಿಕ ॥**

ಸರಿಲೆ ಮೊನ್ಸಿಟ್ಟೋದ್ ಸಕಲಲೋಕನ ಕಾಯ್ವು ।
ಪರಮಾತ್ಮ ಬರ್ದಿರೋ ಪತ್ರದೊಕ್ಕಣೆತೇಳಿ । ಸರಿತಿಳ್ಕ
ನನ್ನೊಳಹೊರಗುನ ನೀ ಹೇ ಪಾರ್ಥ ದಾನಾರ್‌ತೇಳ್ದರಿಂದ್
॥ ೧/೨ ॥

**॥ ವಾರ್ಧಿಕ ॥**

ಸರಿ ಹೇಳಿದೆ ನಿಂಗೆ ನನ್ನೊಡನೆ ಪೌರುಷನ ।
ತೋರಿಸುದು ಸರಿಯಲ್ಲತೇಳಿ ಈ ಮೊದ್ಲೆ ।
ದಾರುಕನ ಜೊತೆ ಗಯನ ಕಳ್ಸಿ ಬುಟ್ಟರೆ ನೀವ್ಗೆ ಒಳ್ಳೆದ್‌ತ
ಹೇಳ್ತೊಳೆಯಾ ॥

ಮೂರು ಲೋಕದ ಗಂಡತೇಳ್ವ ಹಂಕಾರನೀ ।
ತೋರ್ಸಿದರೆ ಕೋಟಿರುದ್ರರ ಕೊಲ್ವ ಕೊಲೆನ ನಾ ।
ತೋರ್ಸಿನೆತ ಬರ್ದದರ ಓದ್ಕಂಡ್ ಭಾವಯೇನ್ತಲೆ ತಿಳ್ತ್
ಪಾರ್ಥನಾಗ ॥ ೧ ॥

**॥ ಶಂಕರಾಭರಣ ಮಟ್ಟೆ ॥**

ಆಗ ಎದ್ದ್ ನಿಂತ್ ಹಾಸ್ಯ ಮಾಡಿ ದಾರುಕ ।
ಬೇಗ ಹೇಳ್ತ್ ಧರ್ಮರಾಯ್ಗೆ ಭಾರಿ ತಮಸೆಲಿ ॥ ೧ ॥

ಇಷ್ಟ ಪಟ್ಟ್ ಗಯನ ನೀನ್ ಬುಟ್ಟುಕೊಡೊಕಡ ।
ಕೆಟ್ಟ್ ಸುಮ್ಗೆ ಹರಿನ ಹಗೆನ । ಕಟ್ಟಿಕಂಬಡ ॥ ೨ ॥

ಇಷ್ಟ್ ಹೇಳಿ ಧರ್ಮರಾಯ್ನ ಸೆರಗ್ ಹಿಡ್ಕಂತ್ ।
ತಟ್ಟ ನೊಂದ ಹಂದಿನಂಗೆ ಭೀಮನೆದ್ದತ್ ॥ ೩ ॥

**॥ ಭಾಮಿನಿ ॥**

ಬುಡ್ಕಿಲೆತ ಕೋಪೇರಿ ಭೀಮನ್ ।
ಹೊಡ್ದ್ ಕೊಂದನೆತೇಳಿ ಎದ್ರಿಕೆ ।
ಬಡಬಡತ ಓಡ್ಬುಟ್ಟೊ ಉಳ್ದವು ಹೆದ್ರಿಕಂತ ॥
ಹಿಡ್ದವನ ಕುತ್ತಿಗೆಗೆ ಓಲೆನ ।
ಬುಡ್ದೆ ನೇತಾಕ್ತಿದರ ರಾಯಗೆ ।
ಒಡನೆ ಹೇಳ್ತ ಕಳ್ಸಿ ಕೊಟ್ಟತ್ ಮುರ್ಳಿ ಕೋಪಲಿನೆ ॥ ೧ ॥

**॥ ಸೌರಾಷ್ಟ್ರ ತ್ರಿವುಡೆ ॥**

ಕಡಲ ಮಧ್ಯಲಿ ಇರುವ ದ್ವಾರಕ ।
ಪುರಲಿ ಓಲಗಲಿರಿಕೆ ಹಲಧರ ।
ಹರಿನ ಕಾಣದೆ ಎತ್ತ ಹೋತುತ । ಮಂಡೆ ಬಿಸಿಲಿ ॥ ೧ ॥

**॥ಕಾಂಭೋಜಿ ಝಂಪೆ॥**

ಎಲ್ಲಿ ಹೋತಿವ ಕೃಷ್ಣ । ಇಲ್ಲಿ ಕಾಂಬಕೆ ಇಲ್ಲೆ ।
ಮೊರ್ಲರಂಗೆನೆ ಗೋಪಿಕೇರ ॥

ಚೆಲ್ಲಾಟದೊಳಗಿರೊಕು । ಎಲ್ಲ ಹೊತ್ತಿಗುತೇಳ್ಕೆ ।
ಮೆಲ್ಲಮೆಲ್ಲನೆ ಬಾತ್ ಹರಿನು ॥ ೧ ॥

॥ **ಮಧ್ಯಮಾವತಿ ಏಕ** ॥

ಅಣ್ಣ ಕೇಳೋಕು ನನ್ನ ಒಂದೆರ್ಡ್ ಮಾತ್ ।
ಬಣ್ಣ ಮಸ್ಕಿದ ಚಿನ್ನದಂಗಾಗಿ ಹೋತ್ ॥
ಸಣ್ಣವ ಗಯ ಮೇಲೆ ಮಾರ್ಗಲಿ ಬಾತ್ ।
ನನ್ನರ್ಘ್ಯಕವನ ಬೆವ್ರಾಗಲೆ ಬೀತ್ ॥ ೧ ॥

ಎಂಟನೆ ದಿನದೊಳ್ಗೆ ನಿನ್ನ ಕೊಂದನೆತ ।
ಗಂಟಾವ ಭಾಸೆನ ಮಾಡ್ದೆ ಕೇಳಿತ್ತ ॥
ನೆಂಟ ಅರ್ಜುನನಲ್ಲಿ ಗಯ ಹೋವ್ಲ ಅಣ್ಣ ।
ಗಂಟ್ಲ ಕೊಯ್ಯದೆ ಉಳ್ದ್ರೆ ಹೋತೆನ್ನ ಮಾನ ॥ ೨ ॥

॥ **ಭಾಮಿನಿ** ॥

ತಮ್ಮ ಹೇಳ್ದರ ಕೇಳಿಯಾಕನ ।
ಒಮ್ಮೆಗೆದ್ದಾರ್ಭಟಿಸಿ ರಾಮನ್ ।
ಸುಮ್ಮನಿರ್ದುಲೆ ಪಾಂಡವರ ನಾ ಕೊಂದೆ ಸುದ್ದತೆಳಿ ॥
ನಮ್ಮವರ ತಾಕತ್ತ್ ತೋರ್ಸಿನೆ ।
ಹಮ್ಮು ನಿಲ್ಸಿನೆ ಚಿಂತೆ ಬುಡ್ನ ।
ಡ್ಯಮಯ ಕಾಮ್ಯಕ ವನಕೆ ತಕ್ಷಣನೇ ॥ ೧ ॥

॥ **ಶಂಕರಾಭರಣ ಮಟ್ಟೆ** ॥

ಏಳ್ ಸಾತ್ಯಕೀಯೆ ಬೇಗ । ಹೋಲು ಮಾಡ್ನ ಗಯನ ತಲೆನ ॥
ಮೂಳ ಪಾಂಡವರ್ನ ನೆಲಕೆ । ಬೀಳ್ಸಿ ಬರಮಯ ॥ ೧ ॥

॥ **ಭಾಮಿನಿ** ॥

ಮಾಯಗಾರನ ಜೊತೆಲಿ ಕಾಳಗು ।
ಪಾಯಲಿನೆ ನಾ ಗಯನ ಕಾಯೋಕು ।
ಕಾಯದುಳ್ದರೆ ಸೋಮಕುಲಕೆನೆ ಕೆಟ್ಟ ಹೆಸ್ರ್ ತೆಳಿ ॥
ವಾಯು ತಾಗದ ಹಂಗೆ ಗಯನಾ ।
ಸಾಯಕದ ಬತ್ತಳಿಕೆಯೊಳಗೆನೆ ।
ಆಯ ತಪ್ಪದ ಹಂಗೆ ಬೆನ್ನಿಲಿ ಕಟ್ಟಿ ನಿಂತತವ ॥ ೧ ॥

॥ **ಕಾಂಭೋಜಿ ಝಂಪೆ** ॥

ಬಂದರಿಯ ಭಾವಯ್ಯ । ಇಂದ್ ಜಗ್ಳಕೆ ನೀವು ।
ಹಿಂದಿದ್ದ ಸ್ನೇಹ ಮರ್ । ತಿಂದ್ ವೈರಲಿಯೆ ॥
ಇಂದೊರೆಗೆ ನಿವ್ಗೆ ಭಾ । ವಂದಿರಾಗಿದ್ದೊಳಯ ।
ಮುಂದೆ ಹೇಳ್ಬಡಿಯ ಭಾ । ವಂದಿರ್ತ ನಮ್ಮ ॥ ೧ ॥

ಬರೆಮೋಸ ಹೋದೊ ನೀ । ಚರಕುಲದ ಹೆಣ್ತಂದೊ ।
ನರಗೆ ಈ ದುಸ್ಥಿತಿನ । ಹೊರ್ವ ಹಂಗಾತೆ ॥
ತಿರುಕಂಗೆ ತಂಗೆನಾ । ಕರ್ದ್ ಕೊಟ್ಟದ್ ಕುರೆನ ।
ಕೊರಳಿಂಗೆ ನಾವು ಹೂ । ಸರನಿರ್ಸಿದಂಗಾತ್ ॥ ೨ ॥

॥ **ಭೈರವಿ ಏಕ** ॥

ನಿಲ್ಸಿಯ ಕುಂತಿನ ಮಂಜ । ನಿನ ।
ಸಲ್ಗೆನ ನಿಲ್ಸಿಯ ಹಂಞ ॥
ತಲೆಗಡರಿಟುಯ ಪಿತ್ಥ ।
ಕ್ಷಣಕಿಳ್ಸಿನೆ ನೋಡಿಯ ಪಾರ್ಥ ॥ ೧ ॥

ಶ್ರೀಹರಿ ತೇಳೀವರೆಗೆ । ಕೋ । ಪೇರದೆ ಉಳ್ದೆ ಹಿಂಗೇ ॥
ತೋಸ್ರ್ದಾ ಹುಟ್ಟ್ ಸ್ವಭಾವ । ಬು ।
ಟ್ಟಿರುದೆಂಗೆಯ ಏ ಭಾವ ॥ ೨ ॥

ಪರಕೆಲ್ಸಕೆ ಬೀಗರ್ದೆ । ನೀ । ಕೊರ್ಳ್ನ ಕೊಯ್ದಾದಲ್ದೆ ॥
ಗುರ್ತನೆ ಸಿಗದಂಗೆ ಬಂದ । ಸೌ । ಭದ್ರೆನ ನೀನೇ ಕದ್ದ
॥ ೩ ॥

ಕಳ್ಳ ಕೆಲ್ಸ ನಾವ್ಗಿಲ್ಲೆ । ಬುಡ್ । ಗೊಲ್ಲರ ಮನೆ ಹೊಕ್ಕಿತ್ಲೆ ॥
ಕಳ್ಳರ ಕುಲಗುರು ನೀನೇ । ಗೊ । ತ್ತೆಲ್ಲ ಕತೆನ ನಾ ಹೇಳ್ನೆ
॥ ೪ ॥

**॥ ವಾರ್ಧಿಕ ॥**

ವೀರ ಅರ್ಜುನನ ಪರಾಕ್ರಮನ ನೋಡಿ ಹರಿ ।
ಭಾರತದ ಯುದ್ಧಲಿವ ಮಲ್ಲತೇಳ್ಕಂಡಾಗ ।
ಭಾರಿ ಕುಸಿಲಿರಿಕಾಗ ಹಿಂಬತಾಕಂಡ್ ಬಾಕೆ ಕೃಷ್ಣ
ಯೋಚಿಸ್ತಾಗಲೆ ॥
ಭಾರಿ ಕೌಶಲದ ಕೈಶಕ್ತಿನುಪಯೋಗಿಸ್ತಾ ।
ಯಾರ್ಗು ಗೊತ್ತಾಗದಂಗೆನೆ ಕುಬೇರನ ಮಗನ ।
ಶಿರನ ಕತ್ತರ್ಸಿ ಮಾಯಾವಿ ಕುದ್ದಿರಿಕೆ ಅರ್ಜುನನ್
ಹೇಳ್ತಾಗ ಅವಗೆ ॥ ೧ ॥

**॥ ಮೋಹನ ಅಷ್ಟ ॥**

ಹೋತಲೆ ಹೊತ್ತ್ ನೋಡ್ ಭಾವಯ್ಯ ।
ಆತಲೆ ಎಂಟನೆ ದಿನದಪ್ಪಿ ಇಲ್ಲಿಗೆ ಸಂದ್ ॥ ಪ ॥

ಸೂರ್ಯ ದೇವರ್ ಪಶ್ಚಿಮದ ಕಡಲಿಗೆ ಇಳ್ದೋ ।
ಆಡಿದ ಭಾಷೆ ಬಂಜೆನೆ ಕಿಚ್ಚಿ ಕುಂಡನ ।
ಒದ್ಗಿಸ್ ನೋಡ್ದೇನಿಯ ॥
ತಡ ಇದೇಕೆ । ಇದ್ ಕಾಲ ಸರಿಯಾದಿನ್ನ್ । ದಾಕ್ಷಿಣ್ಯ ಇ ।
ಲ್ಲದೆ ನನ್ನನೋಲಯಿ । ಸುದು ಬೇಡತೇಳಿಕೆ ॥ ೧ ॥

ಮೊರುಳ ಕೇಳಿಲ್ಲಿ ಕಾಶಿಲಿ ಕಲಿಯುಗ ಬಾತಾ ।
ದರೆ ಅಜ್ಞಾನಿಗಳಂಗೆ ಕಾಳಗ ಏಕೆ ।
ತೀರ್ತನ್ನ ಭಾಷೆಗಿಂದ್ । ಬತ್ತಳಿಕೆಲಿ ।
ಹೊರ್ತೊಳ ಹೆಣನ ನೋಡ್ । ಯುದ್ಧದ ಚಿಂತೆ ।
ಮರೆದೊಳ್ಳದ್ತ ಹೇಳ್ಕೆ ಗ್ರೇಸಿತ್ ಮೋಸನ ॥ ೧ ॥

॥ **ಭಾಮಿನಿ** ॥

ನೋಡ್ದರಿಯ ದೇವೇಂದ್ರ ಬ್ರಹ್ಮರ್ ।
ನೋಡ್ದರಿಯ ಹರ ಗಿರಿಜೆಯರೆ ನೀವ್ ।
ನೋಡ್ದರಿಯ ದಿಕ್ಕಿಂಗೆ ಒಡೆಯರೆ ಕಿನ್ನರರೆ ಗಂಧರ್ವರೇ
॥ ೧/೨ ॥

॥ **ವಾರ್ಧಿಕ** ॥

ಹಿಡಿಕಳ್ಳ ಚಕ್ರ ಗಿರಿಜೆ ನಂಗೆ ಕೊಟ್ಟಿರೋ ।
ಕಿಡಿಕಾರ್ವ ವೈಷ್ಣವಾಸ್ತ್ರನ ಪಾರ್ಥ ಬುಟ್ಟುಡಿಕೆ ।
ನಡ್ಗಿಬುಟ್ಟತ್ ಆಗ ಗಿರಗಿರತ ಬ್ರಹ್ಮಾಂಡ ಹೇಳುದೇನ್ ॥೧/೨॥

ಬುಟ್ಟುಬುಡಿ ನೀವ್ ದೂರ ನಿಲ್ಲಿನಿ ಈಗ ।
ಮುಟ್ಟಿದರೆ ನಿಮ್ಮಾಣೆ ಉಟ್ಟು ಕೇಳಿ ॥ ೧ ॥

॥ **ಸುರುಟಿ ಏಕ** ॥

ಏನಿದೇನ್ ದೇವ । ಚೋದಿಗ । ಏನ್ ನಿಂದ್ ಭಾವ ॥
ನೀನಾರರ್ಜುನ । ನಾನಾರ್‌ತಲೆ ನಿ ।
ಧಾನಲಿ ಯೋಚ್ಸದೆ । ಏನಿದ್ ಕೋಪಯ ॥ ೧ ॥

ಸತ್ತ ಗಯನ ಇಂದ್ । ಎಬ್ಬುಸ್ । ಎತ್ತ್ ನರನ ಇಂದ್ ॥
ಮತ್ತೆ ಬ್ರಹ್ಮಶಿವ । ಇತ್ತ ಪಾರ್ವತಿನು ।
ನಿತ್ತ್ ಭಕ್ತಿಲವು । ಸ್ತುತಿ ಮಾಡ್ಕಣಿಕೆ ॥ ೨ ॥

॥ **ಬೇಗಡೆ ಅಷ್ಟ** ॥

ವೀರ ನೀ ಗಟ್ಟಿಗನೆ ಕೌಂತೇಯ ।
ಬೇಸರನ ಬುಡು ಮಹ ।
ಭಾರತದ ಕಾಳಗದ ಮಲ್ಲಯ್ಯ ॥
ಮೂರು ಲೋಕಲಿ ನಿನ್ನ ಹೋಲುವ ।
ಧೀರರಿಲ್ಲೆಯ ನನ್ನ ಭಕ್ತನೆ ।
ಭಾರಿ ಮನಸೋತೋದೆ ನಿಂಗೆಯ ।
ಯಾರ್ ಸರಿಹೇಳ್ ನಿನ್ನ ಶಕ್ತಿಗೆ ॥ ೨ ॥

ತಪ್ಪು ಎಳ್ಳಿನಿತಾತ್ಲೆ ನಿನ್ನಿಂದ । ನಾ ನಿನ್ನ ಮೇಲತಿ ।
ತಪ್ಪು ಮಾಡ್ದೆತ ಹೇಳ್ವ ನೆವನಂದ ॥
ತಪ್ಪಿಕಾಗದ್ ದಾರಿ ಮುಂದೆ । ಒಪ್ಪಿರುವ ಭಾರತದ ಕಾಳಗ ।
ಒಪ್ಪಗೊಳ್ಳೊಕು ತೇಳಿ ನಾ ಕೈ ।
ತಪ್ಪು ಮಾಡಿದೆ ಇದುವೆ ಸತ್ಯಯ ॥ ೨ ॥



**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಅಧ್ಯಕ್ಷರ್

**ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ**

**ಸದಸ್ಯರ್**

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ

ಶ್ರೀಮತಿ ಸ್ಮಿತಾ ಅಮೃತರಾಜ್

ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ

ಶ್ರೀ ಧನಂಜಯ ಅಗೋಳಿಕಜೆ

ಶ್ರೀ ದಂಬೆಕೋಡಿ ಎಸ್. ಆನಂದ

ಡಾ. ಕೂಡಕಂಡಿ ದಯಾನಂದ

ಶ್ರೀ ಕುಸುಮಾಧರ ಎ.ಟಿ.

ಡಾ. ವಿಶ್ವನಾಥ ಬದಿಕಾನ

ಶ್ರೀ ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ

ಶ್ರೀ ಪುರುಷೋತ್ತಮ ಕಿರ್ಲಾಯ

ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು

ಶ್ರೀ ಕಿರಣ್ ಕುಂಬಳಚೇರಿ

ಶ್ರೀ ಭರತೇಶ ಅಲಸಂಡೆಮಜಲು

ರಿಜಿಸ್ಟ್ರಾರ್

**ಶ್ರೀ ಚಿನ್ನಸ್ವಾಮಿ**



ಯಕ್ಷಗಾನ ಕಳಲಿ ಜನಪ್ರಿಯ ಬಾಗವತರಾಗಿರ್ವ ಭವ್ಯಶ್ರೀ ಕುಲ್ಕುಂದ ಹುಟ್ಟಿದ ಊರ್ ಸುಳ್ಯ ತಾಲೋಕುನ ಮಂಡೆಕೋಲು. ಬಿ.ಎ., ಬಿ.ಎಡ್, ಮತ್ತೆ ಎಂ.ಎ ಪದವೀಧರೆ. ಇವರ ಗಂಡ ಹರೀಶ್ ಕುಲ್ಕುಂದ ಪತ್ರಕರ್ತರ್. ಮಜನ ಹೆಸ್ರ್ ಅಗಸ್ತ್ಯ. ಭವ್ಯಶ್ರೀನವ್ ಯಕ್ಷಗಾನ ಪದ್ಯದ ಬಾಲಪಾಠನ ಶ್ರೀಮತಿ ನರ್ಮದಾ ಶಿಬರೂರಾಯ, ಶ್ರೀ ವಿಶ್ವವಿನೋದ ಬನಾರಿ ಅವರ್‌ಂದ ಹಾಡುಗಾರಿಕೆಲಿ ಶಿಕ್ಷಣನ ಪಡ್ಕೊಂಡ. ಹಿಮ್ಮೇಳನ ಹಾಂಗೆ ಪದ್ಯ ರಚನೆ ಮಾಡ್‌ದರ ಶ್ರೀ ಗಣೇಶ ಕೊಲೆಕಾಡಿ ಅವರ್‌ಂದ ಮಾಡ್‌ದೊ.

ಶಿಕ್ಷಕಿಯಾಗಿ ನಾಲ್ಕ್ ವರ್ಸ ಕೆಲ್ಸ ಮಾಡ್ದ ಭವ್ಯಶ್ರೀ ಮುಂದೆನ ದಿನಗಳ್‌ಲಿ ಗೃಹಿಣಿಯಾಗಿ ಯಕ್ಷಗಾನ ರಂಗಭೂಮಿಲಿ ಸಕ್ರಿಯವಾಗಿ ತೊಡಗಿಸಿಕೊಂಡೊ. ದಕ್ಷಿಣ ಕನ್ನಡ, ಕೊಡ್‌ಗ್, ಕಾಸರ್‌ಗೋಡ್, ಉತ್ತರ ಕನ್ನಡ ಅಲ್ಲದೆ ಬೆಂಗ್ಳೂರ್ ಮತ್ತೆ ದೂರದ ಮುಂಬೈ ಹಾಂಗೆ ಡೆಲ್ಲಿಲೂ ಇವು ಭಾಗವತರಾಗಿದ್ ಆಟಕೂಟಗಳ್‌ಲಿ ಪಾಲ್ಗೊಂಡಳೊ. ಯಕ್ಷಗಾನ ಅಕಾಡೆಮಿ ಮಂಗಳೂರು ವಿಶ್ವವಿದ್ಯಾನಿಲಯಲಿ ಏರ್ಪಾಟ್ ಮಾಡ್ದ ಯಕ್ಷಗಾನ ಕಮ್ಮಟಲಿ ಹಾಡ್‌ಗಾರ್ತಿಯಾಗಿ ಇವ್ ಪಾಲ್ಗೊಂಡಳೊ. ಸೂಡ ಮೇಳಲಿ ಒಂದು ವರ್ಸ ಬಾಗವತರಾಗಿ ತಿರ್ಗಾಟ ನಡ್ಸಿದ ಅನುಬವ ಇವ್‌ಕೆ ಉಟ್ಟು. ಇವ್ ಆಕಾಶವಾಣಿನ ಬಿ.ಗ್ರೇಡ್ ಕಲಾವಿದೆ.

ಯಕ್ಷಗಾನ ಪದ್ಯನ ರಚನೆ ಮಾಡ್ದರ್‌ಲಿನೂ ಸಿದ್ಧಹಸ್ತರಾಗಿರ್‌ವ ಭವ್ಯಶ್ರೀ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಸೂಚನೆನ ಮೇರೆಗೆ ತನ್ನ ಅವ್ವಬಾಸೆ ಆಗಿರ್‌ವ ಅರೆಬಾಸೆಗೆ ಕನ್ನಡದ 6 ಜನಪ್ರಿಯ ಪ್ರಸಂಗಗಳ ಬಾಸಾಂತರ ಮಾಡಿಯೊಳ. ಬೆಳ್ತಂಗಡಿ ಕಾಟಾಜೆ ಶ್ರೀ ದುರ್ಗಾಪರಮೇಶ್ವರಿ ದೇವಳದ ಜಾಗೆ ಮಹಿಮೆನ ಆದರ್‌ಸಿ 'ಶ್ರೀ ಕಾಟಾಜೆ ಕ್ಷೇತ್ರ ಮಹಿಮೆ'ತೇಳ್‌ವ ಪ್ರಸಂಗನ ರಚಿಸಿಯೊಳೊ. ಇವು ರಚನೆ ಮಾಡ್‌ದ ಯಕ್ಷಗಾನ ಪ್ರಸಂಗಗ ಈಗಾಗಲೇ ತಾಳಮದ್ದಳೆ ಮತ್ತೆ ಬಯಲಾಟದ ರೂಪಲಿ ಪ್ರದರ್ಶನ ಕಂಡುಟು. ಭವ್ಯಶ್ರೀ ಕುಲ್ಕುಂದ ಅವರ ಯಕ್ಷಗಾನ ಗೈಮೆನ ಗುರ್ತುಸಿ ಸುಮಾರ್ ಸಂಗ ಸಂಸ್ತೆಗ ಗೌರವಿಸಿಯೊಳೊ. ದೆಹಲಿ ಕನ್ನಡ ಸಂಘ, ಮುಂಬೈ ಬಂಟರ ಸಂಘ, ಬೆಂಗಳೂರು ತುಳು ಕೂಟ, ಒಡಿಯೂರು ಪ್ರತಿಷ್ಠಾನ ಸನ್ಮಾನ ಮಾಡ್ಯೊಳೊ. 2005ರ ಸಾಲ್‌ನ ಲಕ್ಷ್ಮೀಭಾಸ್ಕರ ಯಕ್ಷಸೇವಾನಿಷ್ಠ ಪ್ರಶಸ್ತಿ ಮತ್ತೆ ಸುಳ್ಯ ತಾಲೂಕು ಮಟ್ಟದ ರಾಜ್ಯೋತ್ಸವ ಪುರಸ್ಕಾರನ ಪಡ್ಕೊಂಡೊಳೊ.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಮಡಿಕೇರಿ

ರೂ. 100